



SRI KODANDA RAMA SWAMY TEMPLE, TIRUPATI
BRAHMOTSAVAM. FROM 13-3-83







ವರ ಮಣಿಗಳ ಕೆತ್ತಿಸಿದ ಮುಕುಟದ
ಚಾರು ತಿರುಮಲಗಿರಿಯ ತಿಮ್ಮರಾಯನ ಕಂಡೆನಾ

ಪೆರೆಯ ನೊಸಲ ತಿಲಕದ ದಿವ್ಯ ಮಧುಕರ
ಕುರುಳು ಭ್ರೂಲತೆಯ ಶ್ರೀಶಾರದ ಕರ್ಣಯುಗಳ
ಅರಳಿದ ಅರುಣಕಮಲದ ಅರಳನಯನದ
ವರದಂತ ಪಂಕ್ತಿಯೆಸೆವ ಅಧರಚುಬುಕಾಗ್ರ
ಸ್ಫುರಿತ ಕಂಬು ಕಂಠದ ಶ್ರೀರೇಖೆ ಚತುರ್ಭುಜ
ಅದಶಂಬ ಕಟಿ ಶೋಭಾಭಯಹಸ್ತವ ಕಂಡೆ
ತರಣಿಯನಂತ ಕಿರಣ ಜಾನುಜಂಘೆಯ
ಕಿರುಗೆಜ್ಜೆ ಎರಡು ಪಾದಾಂಗುಳಿಯ ನಖದ
ವರ ವಜ್ರಾಂಕುಶ ಧ್ವಜರೇಖೆಯಿಂದೊಪ್ಪುವ
ಚರಣ ಮಾಂದಳಿರ ಕಂಡೆ ಒಲವಿಂದ
ಪರಮ ಪುರುಷ ಗುಣಾತ್ಮ ನೀಲಮೇಘಶ್ಯಾಮ
ಸಿರಿಯರಸು ಪುರಂದರ ವಿಠಲ ರಾಯನ ಕಂಡೆ

ಅಂದುಗೆ ಕಡೆಯ ಪೆಂಡೆಯವು ಮೆರೆವ
ಹೊಂದಿದ ಕಾಂಚೀಧಾಮವ ಕಂಡೆ ನಾ
ಕಂಡು ಪೇಳಲೇನು ಜಾಂಬೂನದ ಪಟ
ಪೊಂದಿದ ಚಿನ್ನದ ಸೂತ್ರವ ಕಂಡೆ ನಾ
ಕುಂದದೆ ಹೊಳೆವ ಕೌಸ್ತುಭ ವೈಜಯಂತಿಯನ್ನು ಕಂಡೆ ನಾ
ಇಂದವಿನಂದದಿ ಮೆರೆವ ಕುಂಡಲ
ಬಂಧುರ ಮಹಿಮ ಭಾವುರ ಕೀರ್ತಿಯಾ-
ನಂದದಿ ನಿರುಪಮ ತಿರುವೆಂಗಳಪ್ಪ ಪು-
ರಂದರ ವಿಠಲರಾಯನ ಕಂಡೆ ನಾ

ಸಿರಿಗದೆ ವೈಕುಂಠವೆಂದು ತೋರುವ ಹಸ್ತ
ತಿರುವೆಂಗಳಪ್ಪ ಶ್ರೀ ಪುರಂದರ ವಿಠಲ

— ಪುರಂದರದಾಸರು.




ಗೌರವ ಸಂಪಾದಕರು :

ಜಿ ಕುಮಾರಸ್ವಾಮಿರೆಡ್ಡಿ ಐ.ಎ.ಎಸ್.,

ಸಂಪಾದಕ :

ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ :

ಬಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ :

ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ

ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**





**ಸಂಪುಟ ೧೩] ಫೆಬ್ರವರಿ ೧೯೮೩ [ಸಂಚಿಕೆ ೯**


# ವಿಷಯಸೂಚಿ




ಈ ವಿಶಾಲ ವಿಶ್ವವೆಲ್ಲವೂ ಪ್ರಾಕೃತಿಕ ಎಂದರೆ ಪ್ರಕೃತಿ ಸಂಬಂಧವಾದದ್ದು. ಹಾಗಿದ್ದಲ್ಲಿ ಇದೆಲ್ಲ ಎಲ್ಲಿಂದ ಉದ್ಭವಿಸಿತು ಎಂದರೆ ; ಪುರುಷೋತ್ತಮನಾದ ಶ್ರೀಮನ್ನಾರಾಯಣನು ಪುರುಷರೂಪನೆಂದೂ ಪ್ರಕೃತಿ ಸ್ತ್ರೀರೂಪವೆಂದೂ, ಬಹು ಮೋಹಕವಾದ ಈ ಮಾಯಾರೂಪಿಣಿಯ ಆಧಾರವಾಗಿ ಈ ವಿಶ್ವ ಸೃಜನ ಕಾರ್ಯಕ್ರಮವನ್ನು ಆತ ನೆರವೇರಿಸಿದನೆಂದೂ ಪುರಾಣಗಳು ಹೇಳುತ್ತಿವೆ. ಪರಮ ಪುರುಷ ಎಂಬುದರ ಬಗ್ಗೆ ಶೈವ ವೈಷ್ಣವಗಳು ತಮ್ಮ ತಮ್ಮ ಅಧಿಷ್ಠಾನ ದೈವಗಳ ಪರವಾಗಿ ವಾದಿಸುತ್ತಿದ್ದರೆ, ಶಾಕ್ತವು ಇದೆಲ್ಲ ತನ್ನ ಸಂಕಲ್ಪ ಪ್ರಭಾವವೆಂದೂ, ತನ್ನ ಅನುಗ್ರಹ ಬಲದಿಂದಲೇ ತ್ರಿಮೂರ್ತಿಗಳು ತಮ್ಮ ವಿಶ್ವಧರ್ಮ ನಿರ್ವಹಣೆ ಮಾಡುತ್ತಿರುವರೆಂದೂ ಹೇಳುತ್ತದೆ. ಯಾವುದು ಹೇಗಿದ್ದರೂ ಸೃಷ್ಟಿ ಶೋಭಾಯಮಾನ ಆಗಬೇಕಾದರೆ ಪ್ರಕೃತಿರೂಪವಾದ ಮಹಾಶಕ್ತಿಗೆ ಸಂಸರ್ಗ ಅತ್ಯಗತ್ಯ. ಶ್ರೀಮನ್ನಾರಾಯಣನು ಯೋಗನಿದ್ರೆಯಿಂದೆದ್ದು ಸೃಷ್ಟಿ ಸಂಕಲ್ಪಮಾಡಿದನೆಂದೂ ತತ್ಫಲವಾಗಿ 'ಹೃದಯಾದಧಿ ಜಾಯಸೇ' ಎಂಬಂತೆ ನಾಭೀಕಮಲದಿಂದ ಬ್ರಹ್ಮನು ಆವಿರ್ಭವಿಸಿದನೆಂದೂ, ಆತನು ಸರಸ್ವತಿಯ ಆಲಂಬನೆಯಿಂದ ವಾಚಿಕ ಸಂಕಲ್ಪದಿಂದ ನವನವೋನ್ಮೇಷವಾದ ಈ ವಿಶಾಲ ವಿಶ್ವವನ್ನು ಸೃಷ್ಟಿಸಿದನೆಂದೂ ಕೇಳಿದ್ದೇವೆ. ಗೀತೆಯಲ್ಲಿ ಹೇಳಿದಂತೆ ಕ್ಷೇತ್ರ, ಬೀಜ, ಕ್ಷೇತ್ರಜ್ಞ ಎಲ್ಲವೂ ತಾನೇ ಆದ ಆ ಅಖಂಡ ಚೈತನ್ಯವು ಯಾವ ನಾಮರೂಪದಲ್ಲಿದ್ದರೂ, ಮೇಲಿನ ವೈವಿಧ್ಯವನ್ನು ಹೊಂದುವ ಸಂಕಲ್ಪ ಮಾಡಿದಾಗ, ಅದಕ್ಕೊಂದು ಮಾಯಾವರಣ, ಮನೋಹರ ಕಲ್ಪನೆ ಆಲಂಬನವಾಗದೆ ಹೋಗದೆಂದೂ, ಅದಿಲ್ಲದಾಗ ಸೃಷ್ಟಿಗೆ ಪರಿಪೂರ್ಣತೆ, ಪ್ರಗತಿ ಇರುವುದಿಲ್ಲವೆಂದೂ ಹೇಳಬಹುದು. ನಿಜವೆಂದರೆ ಮಾನವ ಜೀವನವೂ ಅಷ್ಟೆ. ಮನ ಕಮನೀಯವೂ, ಬದುಕು ರಮಣೀಯವೂ ಆಗಬೇಕಾದರೆ ಪುರುಷಾಂಶನಾದ ನರನಿಗೆ ಪ್ರಕೃತಿರೂಪೀ ಸ್ತ್ರೀಯ ಬೆಂಬಲವಿರಬೇಕು. ಇದೇ ಜೀವನಕ್ಕೆ ಇಹ ಹಾಗೂ ಪರ. ಶ್ರೀಮನ್ನಾರಾಯಣನು ಲಕ್ಷ್ಮಿಗೆ ವಕ್ಷದಲ್ಲಿ ಸ್ಥಳ ನೀಡಿದನೆಂದೂ, ಬ್ರಹ್ಮನು ವಾಕ್ಪತಿ ಆದನೆಂದರೂ ಅರ್ಥ ಇದೇ. ಈ ಪರಿಪೂರ್ಣತೆಯನ್ನು ನೆನಪಿಗೆ ತರುವುದೇ ಶಿವನ ಅರ್ಧನಾರೀ ಸ್ವರೂಪ. ಈ ರಸಮಯ ಜಗತ್ತಿಗೆ ಆ ಪರಸ್ಪರಾಶ್ಲಿಷ್ಟತೆಯೇ ಕಾರಣವೆನ್ನುವುದರಲ್ಲಿನ ದೃಷ್ಟಿ ಇದೇ.

ಜ್ಞಾನ ಎನ್ನುವುದು ಬ್ರಹ್ಮಸ್ವರೂಪ, ಏಕರೂಪ, ಅಖಂಡಜ್ಯೋತಿರ್ಮಯ, ಆದ್ಯಂತರಹಿತ, ಕಾಲಾತೀತ. ಅದು ಸ್ಥಾಣುವಿನಂತೆ ನಿಶ್ಚಲ, ನಿರಂಜನ. ಕಾಲಕ್ಕೆ ಸರಿಯಾದ ಕಾಲಮಾನ ಇಲ್ಲವೆಂದಾಗ ಕಾಲಾತೀತವಾದ ಜ್ಞಾನದ ಆದ್ಯಂತಗಳನ್ನು ತಿಳಿದುಕೊಳ್ಳಬೇಕೆನ್ನುವುದು ಅರ್ಥರಹಿತ. ಲಿಂಗರೂಪವನ್ನು ಅಳೆಯಬೇಕೆಂದು ಪ್ರಯತ್ನಿಸಿದ ಬ್ರಹ್ಮ, ವಿಷ್ಣುಗಳ ಕಥೆ ಈ ಅಂಶವನ್ನೇ ತಿಳಿಸುತ್ತದೆ. ನಾರಾಯಣನು ಸಾಕ್ಷಾತ್ ಕಾಲಾತೀತ ಪರಂಜ್ಯೋತಿ ಶಿವನೂ ತಾನೇ ಆಗಿರುವುದರಿಂದ ಈ ಸತ್ಯವನ್ನು ತಿಳಿಸುವಂತೆ ತನ್ನ ಪ್ರಯತ್ನದಿಂದ ವಿರಮಿಸಲು, ಜಗತ್ ಸೃಷ್ಟಿಕರ್ತನೆಂಬ ಅಹಂ ಅಣಗದ ಬ್ರಹ್ಮನು ವಿಫಲನಾಗಿ ಹೇಗೆ ಅವಮಾನ, ಪೂಜಾರಾಹಿತ್ಯವನ್ನು ಹೊಂದಿದನೆಂಬುದು ನಮಗೆ ತಿಳಿದದ್ದೇ. ಶಿವತತ್ತ್ವವು ನಮಗೆ ಸ್ಥೂಲವಾಗಿ ತಿಳಿಸುವುದೂ ಇದನ್ನೇ. ಅಖಂಡ ಜ್ಞಾನರೂಪ ಬ್ರಹ್ಮದಿಂದ ಪಾರಮಾತ್ಮಿಕ ಕೃತಿಯ ಕಾರಣದಿಂದಾಗಿ ರಸಮಯ ಸೃಷ್ಟಿ ರೂಪೊಡೆಯಿತು. ಆ ಮಹಾ ಚೈತನ್ಯದ ಭಾಗವೇ ಈ ಸ್ಥೂಲ ಸಾಂಸಾರಿಕ ರೂಪ. ಪೂರ್ಣಕಾಮನಾದ ಮಾನವನೇ (ಇಂದ್ರಿಯಾವಧಿಗಳನ್ನು ಗ್ರಹಿಸಿ, ನಿಗ್ರಹಿಸಿದವನು) ಪರಮೇಶ್ವರನ ಪ್ರೀತಿಪಾತ್ರ.

ಹೀಗೆ ಎಷ್ಟೋ ಅರ್ಥಗಳನ್ನು ಮತ್ತೆಷ್ಟೋ ದೇವತೆಗಳ ಬಗ್ಗೆ ಆಲೋಚಿಸಿದಂತೆಲ್ಲ ಹೇಳಬಹುದು. ಮಹರ್ಷಿಗಳ ಹೃದಯ ಒಂದು ಮಹತ್ತರ ಕ್ಷೀರಸಾಗರ. ಸಮಸ್ಯಾಮಂದರಗಳನ್ನು ಹಾಕಿ ಆಲೋಚನಾ ರಜ್ಜುಗಳ ಮೂಲಕ ಕಡೆಯಬೇಕೇ ಹೊರತು ಕಡೆಗೆ ಅಮೃತ ಹುಟ್ಟದಿರದು. ಶಿವರಾತ್ರಿ ಮಹಾಪರ್ವದಿನದಲ್ಲಿ ಆ ಆದಿದಂಪತಿಗಳನ್ನು ಸ್ಮರಿಸಿ ತೃಪ್ತರಾಗೋಣ.

ನಮಃಶಿವಾಭ್ಯಾಂ ನವಯೌವನಾಭ್ಯಾಂ, ಪರಸ್ಪರಾಶ್ಲಿಷ್ಟ ವಪುರ್ಧರಾಭ್ಯಾಮ್ ।
ನಗೇಂದ್ರಕನ್ಯಾ ವೃಷಕೇತನಾಭ್ಯಾಂ, ನಮೋ ನಮಶ್ಶಂಕರ ಪಾರ್ವತೀಭ್ಯಾಮ್ ॥

# ನಾರಾಯಣೀಯಂ

ಕೇರಳದ ತಿರುನಾವಾಯ (ಕಲ್ಲಿಕೋಟೆಗೆ ಸಮೀಪದ) ದೇವಾಲಯದಿಂದ ಸುಮಾರು 3–4 ಮೈಲು ದೂರದಲ್ಲಿ 'ಚಂದನಕ್ಕಾವು' ಎಂಬ ಸ್ಥಳ ಇದೆ. ಅಲ್ಲಿ ಒಂದು ದೇವೀ ಮಂದಿರವಿದೆ. ಅದರ ಸಮೀಪ 'ಮೇಲ್ಪತ್ತೂರು' ಎಂಬ ಬ್ರಾಹ್ಮಣ ಮನೆತನವಿತ್ತು. ಚಂದನಕ್ಕಾವು ಭಗವತಿ ಆ ಮನೆತನದ ಕುಲದೈವವಾಗಿದ್ದಳು. ಮೇಲ್ಪತ್ತೂರು ಮನೆತನದಲ್ಲಿ ಮಾತೃದತ್ತನೆಂಬ ಬ್ರಾಹ್ಮಣನಿದ್ದನು. ಕೊಲ್ಲಂ ಶಕ 735 ರಲ್ಲಿ (ಸುಮಾರು 16 ನೇ ಶತಮಾನದ ಮಧ್ಯಭಾಗದಲ್ಲಿ) ಆ ಬ್ರಾಹ್ಮಣವರ್ಯನಿಗೆ ಜನಿಸಿದ ಮಗನೇ ಮುಂದೆ ನಾರಾಯಣಭಟ್ಟತ್ತಿರಿ ಅಥವಾ ನಾರಾಯಣಭಟ್ಟಪಾದರು ಎಂದು ಪ್ರಸಿದ್ಧನಾದ. ಆಗ ಅವರ ಮನೆಯಿದ್ದ ಸ್ಥಳವು ಈಗ ಹಾಳುಬಿದ್ದು, ಕಾಡು ಬೆಳೆದಿದ್ದರೂ, ಕೇರಳದ ವಿದ್ವಾಂಸರೂ, ಭಕ್ತಾದಿಗಳೂ ಅದನ್ನು ಪುಣ್ಯಭೂಮಿಯೆಂದು ಈಗಲೂ ಗೌರವಿಸುತ್ತಾರೆ.

ಭಟ್ಟತ್ತಿರಿಯವರಿಗೆ ನಾಲ್ಕುಮಂದಿ ಗುರುಗಳಿದ್ದರೆಂದು ತಿಳಿದು ಬರುತ್ತದೆ. ಅವರಲ್ಲಿ ಮೊದಲಿಗರು ತಂದೆಯಾದ ಮಾತೃದತ್ತನ್ ಭಟ್ಟತ್ತಿರಿ ಅವರು ಪಂಡಿತ ಶ್ರೇಷ್ಠರಾಗಿದ್ದರು. ಮಾಧವನ್, ದಾಮೋದರನ್, ಅಚ್ಯುತನ್ ಎಂಬವರು ಇನ್ನುಳಿದ ಮೂವರು ಗುರುಗಳಾಗಿದ್ದರು. ಮೀಮಾಂಸೆ, ತರ್ಕ, ವ್ಯಾಕರಣಗಳನ್ನು ಈ ಗುರುಗಳಿಂದ ಅಭ್ಯಾಸಮಾಡಿದರು.

ಚಿಕ್ಕವಯಸ್ಸಿನಲ್ಲೇ ತಂದೆಯಿಂದ ಮೀಮಾಂಸಾ ತಂತ್ರವನ್ನು ಅಭ್ಯಾಸಮಾಡಿ, ಅದರಲ್ಲಿ ಅಸಾಧಾರಣವಾದ ನೈಪುಣ್ಯವನ್ನು ಸಂಪಾದಿಸಿದರಲ್ಲದೆ, ನಾನಾ ಶಾಸ್ತ್ರಗಳಲ್ಲಿ ಪ್ರಾವೀಣ್ಯ ಹೊಂದಿದ್ದರು. ಶಬ್ದಶಾಸ್ತ್ರವನ್ನು ಕಲಿಯುವುದಕ್ಕಾಗಿ ಮಾತ್ರ ಅವರು ಅಚ್ಯುತವಿಶಾರದಿ ಎಂಬುವರನ್ನು ಗುರುವಾಗಿ ಸ್ವೀಕರಿಸಿದ್ದರು. ಹೀಗೆ ಸಕಲವಿದ್ಯಾಪಾರಂಗತರಾಗಿ, ಧರ್ಮಾನುಷ್ಠಾನ ನಿರತರಾಗಿ, ಪಂಡಿತವರೇಣ್ಯರೆನಿಸಿ ಭಟ್ಟತ್ತಿರಿಯವರು ಮೆರೆಯುತ್ತಿದ್ದರು.

ತನ್ನ ಭಕ್ತರಿಗೆ ಅಥವಾ ಅಂಶಭೂತರಿಗೆ ಅಹಂಕಾರವುಂಟಾಗಿ, ಅವರು ಅಧಃಪತನ ಹೊಂದುವುದನ್ನು ಭಕ್ತವತ್ಸಲನಾದ ಹರಿಯು ಸಹಿಸಲಾರನು. ಅವರಲ್ಲಿ ಉಂಟಾಗುವ ಅಹಂಕಾರವನ್ನು ಕಳೆದು ಚಿತ್ತಶುದ್ಧಿಯನ್ನು, ಭಕ್ತಿಯನ್ನೂ ಉಂಟುಮಾಡಲು ಏನಾದರೊಂದು ವಿಪತ್ತನ್ನು ಕೊಡುವುದು ಆತನ ನಿಯಮ. ಶ್ರೀಹರಿಯು ಭಕ್ತರಿಗೆ ಕೊಡುವ ಕಷ್ಟಪರಂಪರೆಗಳೂ ಆತನ ಅನುಗ್ರಹ ವಿಶೇಷಗಳೇ ಆಗಿ ಪರಿಣಮಿಸುತ್ತವೆ. ಚಿನ್ನವನ್ನು ಪುಟಕ್ಕಿಟ್ಟು, ಅದರ ಕಾಂತಿ ಹೆಚ್ಚಿಸುವಂತೆ, ಸಜ್ಜನರನ್ನು ಕಷ್ಟಕ್ಕೆ ಗುರಿಮಾಡಿ ಅವರ ಮಹತ್ವವನ್ನು ಪ್ರಕಟಪಡಿಸುವುದೂ ಭಗವಂತನ ಲೀಲಾವಿಲಾಸವೆಂದು ಭಕ್ತರ ನಂಬಿಕೆ.

ಪಾಂಡಿತ್ಯ, ಪ್ರಭುತ್ವ – ಇವು ಒಂದೆಡೆ ಸೇರಿದಾಗ ಅಹಂಕಾರವುಂಟಾಗುವುದು ಸ್ವಾಭಾವಿಕ. ಭಟ್ಟಪಾದರಲ್ಲಿ ಇವೆಲ್ಲವೂ ಸೇರಿ ತಾನು ಮೇಧಾವಿ ಎಂಬ ಅಹಂಭಾವ ಮೂಡಿರಬಹುದು. ಆ ಕಾಲಘಟ್ಟದಲ್ಲಿ ದೇವರ ಇಚ್ಛೆಯೋ ಎಂಬಂತೆ ಮಹಾವಾತರೋಗವು ಅವರಿಗೆ ಅಂಟಿಕೊಂಡಿತು. ವೈದ್ಯರ ಚಿಕಿತ್ಸೆಗಳಿಂದ ಅದು ವಾಸಿಯಾಗಲಿಲ್ಲ. ಯಾತನೆಯಿಂದ ನರಳಿದರು. ಪುಣ್ಯವುಳ್ಳ ಜೀವರಿಗೆ ಮಾತ್ರ ಕಷ್ಟಕಾಲದಲ್ಲಿ ದೇವರ ಭಜನೆಯ ಕಡೆಗೆ ಮನಸ್ಸು ತಿರುಗುವುದು. ಪುಣ್ಯಶಾಲಿಗಳೂ, ಸುಸಂಸ್ಕೃತರೂ ಆದ ಭಟ್ಟತ್ತಿರಿಯವರು ತಮ್ಮ ರೋಗ ನಿವಾರಣೆಯ ನೆಪದಿಂದ 'ವಾತಾಲಯೇಶ' (ಗುರುವಾಯುಪುರೇಶ) ನನ್ನು ಭಜಿಸಲು ನಿರ್ಧರಿಸಿದರು. ವಾತದ ನೋವಿನಿಂದ ಅವರಿಗೆ ನಡೆಯಲಸಾಧ್ಯವಾಗಿತ್ತು. ಅವರ ಬಂಧುಗಳು ಹೇಗೋ ಅವರನ್ನು 'ಕಾವಡಿ'ಯಲ್ಲಿರಿಸಿ, ಹೊತ್ತುತಂದು ಗುರುಪುರೇಶನ ಸನ್ನಿಧಿಗೆ ತಲುಪಿಸಿದರೆಂದು ಪ್ರತೀತಿ.

ಶ್ರೀಕೃಷ್ಣಪರಮಾತ್ಮನ ದಿವ್ಯ ಚೈತನ್ಯವು ತುಂಬಿ ತುಳುಕುತ್ತಿರುವ ಹಾಗೂ ಆತನ ಭಕ್ತವಾತ್ಸಲ್ಯಯುಕ್ತವಾದ ಲೀಲೆಗಳಿಂದ ಪರಿಪಾವನವಾದ ಗುರುವಾಯೂರ್ ಕ್ಷೇತ್ರವನ್ನು ಸೇರಿದ ಭಟ್ಟತ್ತಿರಿ, ತಮ್ಮ ಯಾತನೆಯನ್ನು ಸಹಿಸಿಕೊಂಡು ದೇವರನ್ನು ಭಕ್ತಿಯಿಂದ ಭಜಿಸ ತೊಡಗಿದರು

ಅವರ ಶುಶ್ರೂಷೆಗಾಗಿ ಜೊತೆಗಿದ್ದವರು, ದಿನಾಲೂ ಅವರನ್ನು ದೇವರಿಗಭಿಮುಖವಾಗಿ ಕುಳ್ಳಿರಿಸುತ್ತಿದ್ದರು. ಕರುಣಾಮೃತವನ್ನು ವರ್ಷಿಸುವ, ಮಂದಹಾಸವನ್ನು ಬೀರಿ ಭಕ್ತರ ಮನಸ್ಸಿಗೆ ಪರಮಾನಂದವನ್ನುಂಟುಮಾಡುವ ಆ ದಿವ್ಯ ಮನೋಹರ ಮೂರ್ತಿಯನ್ನು ಕಣ್ಣಾರೆ ನೋಡುತ್ತಾ, ಸ್ತೋತ್ರ ಮಾಡತೊಡಗಿದರು. ತನ್ನ ವಿರಾಟ್‌ಸ್ವರೂಪವನ್ನು ನೋಡಲು "ದಿವ್ಯಂ ದದಾಮಿ ತೇ ಚಕ್ಷುಃ ......"ಎಂಬುದಾಗಿ ಅರ್ಜುನನಿಗೆ ದಿವ್ಯದೃಷ್ಟಿಯನ್ನು ಕರುಣಿಸಿದ ಆ ಮಹಾಪ್ರಭು, ಭಟ್ಟತ್ತಿರಿಯವರಿಗೂ ಸಚ್ಚಿದಾನಂದಮಯವೂ, ಪೂರ್ಣಬ್ರಹ್ಮವೂ ಆದ ತನ್ನ ದಿವ್ಯಸ್ವರೂಪವನ್ನು ಕಾಣುವ ದಿವ್ಯದೃಷ್ಟಿಯನ್ನು ದಯಪಾಲಿಸಿರಬೇಕು. ದಿವ್ಯದರ್ಶನದಿಂದ ಉಂಟಾದ ದಿವ್ಯಾನುಭವದಿಂದ ಭಕ್ತಿಪರವಶರಾದ ಅವರ ಹೃದಯದಿಂದ ಹೊರಡತೊಡಗಿತು ಸ್ತೋತ್ರ;

ಸಾಂದ್ರಾನಂದಾವಬೋಧಾತ್ಮಕ  
ಮನುಪಮಿತಂ ಕಾಲದೇಶಾವಧಿಭ್ಯಾಮ್ ।  
ನಿರ್ಮುಕ್ತಂ ನಿತ್ಯಮುಕ್ತಂ ನಿಗಮ  
ಶತಸಹಸ್ರೇಣ ನಿರ್ಭಾಸ್ಯಮಾನಂ ।  
ಅಸ್ಪಷ್ಟಂ ದೃಷ್ಟಮಾತ್ರೇ ಪುನರುರು  
ಪುರುಷಾರ್ಥಾತ್ಮಕಂ ಬ್ರಹ್ಮ ತತ್ತ್ವಮ್ ।  
ತತ್ತಾವದ್ಭಾತಿ ಸಾಕ್ಷಾತ್  
ಗುರುಪವನಪುರೇ ಹಂತ !  
ಭಾಗ್ಯಂ ಜನಾನಾಮ್ ॥

— ಎಂಬುದಾಗಿ ಆರಂಭಿಸಿದರು. "ಆನಂದಮಯವೂ ಉಪಮಾತೀತವೂ, ಕಾಲ, ದೇಶಾದಿ ಪರಿಧಿಗಳಿಗೆ ಸೀಮಿತವಲ್ಲದ್ದೂ ಮುಕ್ತಿಸ್ವರೂಪವೂ, ಉಪನಿಷತ್ತುಗಳಿಂದ ಸೇವಿಸಲ್ಪಡುವ ಪರಮ ಪುರುಷಾರ್ಥವೆನಿಸಿದ ಬ್ರಹ್ಮತತ್ತ್ವವು ಜನರ ಭಾಗ್ಯವೆಂಬಂತೆ ಗುರುವಾಯುಪುರದಲ್ಲಿ ಪ್ರತ್ಯಕ್ಷವಾಗಿ ಬೆಳಗುತ್ತಿರುವುದು"ಎಂಬ ಸಾರಾಂಶವನ್ನೊಳಗೊಂಡ ಈ ಶ್ಲೋಕದಿಂದಾರಂಭಿಸಿ, ಗುರುವಾಯುಪುರೇಶನ ಮಹತ್ವ, ಧ್ಯಾನಯೋಗ್ಯವಾದ ಆ ದಿವ್ಯ ವಿಗ್ರಹದ ವರ್ಣನೆ – ಮುಂತಾದ ಸ್ತೋತ್ರಗಳ ಮೂಲಕ ಸ್ತುತಿಸಿದರು. ರೋಗಬಾಧೆಯಿಂದ ಯಾತನಾಕ್ರಾಂತವಾದ ಅವರ ಹೃದಯದಿಂದ ಭಕ್ತಿಪೂರ್ಣವಾದ ಸ್ತೋತ್ರಮಾಲೆ ಎಡೆಬಿಡದೆ ಹರಿಯುತ್ತಿತ್ತು. ಅದು ಭಾಗವತದ ಸಾರಸಂಗ್ರಹವಾಗಿತ್ತು. ಮಹಾ ವಿದ್ವಾಂಸರೂ, ವ್ಯಾಕರಣ, ಛಂದಸ್ಸುಗಳಲ್ಲಿ ಪಾಂಡಿತ್ಯವುಳ್ಳವರೂ ಆಗಿದ್ದುದರ ಪರಿಣಾಮವಾಗಿ ಅವರು ರಚಿಸಿದ ಶ್ಲೋಕಗಳು ಭಕ್ತಿಪರಮಾತ್ರವಲ್ಲದೆ ಪಾಂಡಿತ್ಯಪೂರ್ಣವೂ ಆಗಿವೆ. ಸಾವಿರಕ್ಕೂ ಮಿಕ್ಕಿದ ಸ್ತೋತ್ರರೂಪದ ಶ್ಲೋಕಗಳನ್ನು ಒಳಗೊಂಡ ಈ ಗ್ರಂಥವು "ನಾರಾಯಣೀಯಂ"ಎಂಬ ಹೆಸರಿನಿಂದ ಜನಪ್ರಿಯವಾಗಿದೆ.

"ನಾರಾಯಣೀಯಂ"ದಲ್ಲಿ ನೂರು ದಶಕಗಳಿವೆ. 'ದಶಕ'ವೆಂದರೆ ಹತ್ತು ಶ್ಲೋಕಗಳನ್ನು ಒಳಗೊಂಡ ಒಂದು ಅಧ್ಯಾಯ. ಕೆಲವೊಂದು ದಶಕಗಳಲ್ಲಿ 10 ಕ್ಕಿಂತ ಹೆಚ್ಚು ಶ್ಲೋಕಗಳಿವೆ. ಪ್ರತಿ

---

**ಶ್ರೀಮತಿ ಸಿ. ಎಚ್. ಲಕ್ಷ್ಮಿ**

---

ದಶಕದ ಕೊನೆಯಲ್ಲಿ "ಗುರುವಾಯುಪುರೇಶ! ನನ್ನ ರೋಗವನ್ನು ಹೋಗಲಾಡಿಸು" ಎಂಬ ಪ್ರಾರ್ಥನೆ ಅಡಗಿರುವ ಪಾದವಿರುತ್ತದೆ (ಉದಾ: "ಹರಗದಾಸ್ ಗುರುಗೇಹನಾಥ" "ನಿರುಂಧ್ಯ ರೋಗಂ ಮೇ ಸಕಲಮಪಿ ವಾತಾಲಯಪತೇ", "ವಾತನಾಥ ಪರಿಪಾಹಿ ಮಾಂ ಗದಾತ್" ಇತ್ಯಾದಿ) ಆದರೆ ಈ ಸ್ತೋತ್ರ ಕೇವಲ ದೈಹಿಕ ರೋಗ ಶಮನಕ್ಕಾಗಿರುವ ಪ್ರಾರ್ಥನೆಯಲ್ಲ. ಭಕ್ತಕೋಟಿಯ ಸಂಸಾರ ರೋಗ ಶಮನಕ್ಕಾಗಿರುವ ಪ್ರಾರ್ಥನೆಯೆಂದು ಭಕ್ತಸಮೂಹದ ಅಭಿಪ್ರಾಯ. ಆದರೆ ಈ ಗ್ರಂಥ ನಿರ್ಮಾಣಕ್ಕೆ ಮುಖ್ಯ ಪ್ರೇರಣೆ ಅವರಿಗೊದಗಿದ ವಾತರೋಗವೆಂಬುದು ನಿರ್ವಿವಾದ. 'ನಾರಾಯಣೀಯ'ದ ಮೊದಲನೇ ದಶಕ, ಕೊನೆಯದಶಕ ಹಾಗೂ ರಾಸಕ್ರೀಡಾವರ್ಣನೆಯ ದಶಕಗಳು ಶ್ರೀಗುರುವಾಯೂರಪ್ಪನ ಭಕ್ತರಿಗೆ ಅತ್ಯಂತ ಪ್ರಿಯವಾದವುಗಳು. ಅವುಗಳನ್ನು ಕಂಠಪಾಠಮಾಡಿ, ನಿತ್ಯ ಪಠಿಸಿ, ಭಜಿಸುವ ಭಕ್ತರನ್ನು ಹೆಚ್ಚಿನ ಸಂಖ್ಯೆಯಲ್ಲಿ ಕಾಣಬಹುದು. ರೋಗಶಮನಾರ್ಥವಾಗಿ, ವಿಶೇಷತಃ ವಾತರೋಗ ನಿವಾರಣೆಗಾಗಿ ಈ ಗ್ರಂಥವನ್ನು ಪಾರಾಯಣ ಮಾಡುವುದು ಪ್ರಯೋಜನಕರವೆಂದು ಭಕ್ತಜನರ ನಂಬಿಕೆ. ಗುರುವಾಯೂರ್ ಪರಿಸರದಲ್ಲಂತೂ ಪಂಡಿತ–ಪಾಮರ ಭೇದವಿಲ್ಲದೆ ಪಠಿಸುವವರನ್ನು, ನಿತ್ಯ ಪಾರಾಯಣದ ನಿಯಮ ಪಾಲಿಸುವವರನ್ನು ಕಾಣಬಹುದು. 'ನಾರಾಯಣೀಯ ಸಪ್ತಾಹ'ವನ್ನೂ ನಡೆಸುವ ರೂಢಿಯಿದೆ, 'ಗಾನಕೋಕಿಲ' ಹಾಡಿದ ಈ ಶ್ಲೋಕಗಳ ಧ್ವನಿಮುದ್ರಿಕೆಗಳು ಬಿತ್ತರಿಸಲ್ಪಡುವಾಗ ಆ ಪರಿಸರದಲ್ಲಿ ಕಾಲಿಟ್ಟ ಪ್ರತಿಯೊಬ್ಬನ ಹೃದಯದಲ್ಲೂ ಅದ್ವಿತೀಯವಾದ ದಿವ್ಯಾನಂದ ತುಂಬಿ ತುಳುಕುವುದು. ರಾಸಕ್ರೀಡೆಯ ಶ್ಲೋಕಗಳು ಪರಮಾತ್ಮನ ಆ ದಿವ್ಯ ಲೀಲಾರಂಗವನ್ನು ಕಣ್ಮುಂದೆ ತರುವಂಥವು. ಕೊನೆಯ ದಶಕವಂತೂ ಅತ್ಯಂತ ಮಹತ್ವವುಳ್ಳದ್ದು. ಆ ಸ್ತೋತ್ರಗಳನ್ನು ರಚಿಸುವಾಗಲೇ ಭಟ್ಟವಾದರಿಗೆ, ಭಗವಂತನ ಸಾಕ್ಷಾತ್ಕಾರವಾಯಿತೆಂದೂ, ಅವು ಗುರುಪುರೇಶನಿಗೆ ಅತ್ಯಂತ ಪ್ರಿಯವಾದ ಶ್ಲೋಕಗಳೆಂದೂ ಭಕ್ತರ ಅಭಿಮತ. ಅದಕ್ಕೊಂದು ಸಣ್ಣ ಕಥೆಯಿದೆ –

ಕಬ್ಬನ್ನು ಹಿಂಡಿದಷ್ಟೂ ಅಮೃತಸದೃಶವಾದ ರಸವನ್ನು ಸುರಿಸುವಂತೆ, ಗಂಧವನ್ನು ತೇದಷ್ಟೂ ಪರಿಮಳವನ್ನು ಬೀರುವಂತೆ, ಚಿನ್ನವನ್ನು ಕಾಯಿಸಿ ಬಡಿದಷ್ಟು ಹೊಳಪನ್ನು ಕೊಡುವಂತೆ, ಸಜ್ಜನರನ್ನು ಕಷ್ಟಕ್ಕೆ ಗುರಿಮಾಡಿದಷ್ಟು ಅವರ ಸತ್ಯಾತಿಶಯವು ಪ್ರಕಟವಾಗುವುದು. ಈ ಸತ್ಯವನ್ನು ಜಗತ್ತಿಗೆ ತೋರಿಸಲು ಭಗವಂತನು ಭಕ್ತರನ್ನು ಸತ್ವಪರೀಕ್ಷೆಗೆ ಗುರಿಮಾಡುತ್ತಿರುವುದು ಕಂಡುಬರುವುದು. ಅದರಂತೆ ಭಟ್ಟಪಾದರ ಭಕ್ತಿವಿಶೇಷವನ್ನು ಹೊರಗೆಡಹಿ ಆ ಮಾಧುರ್ಯವನ್ನು ಸವಿದು, ಭಕ್ತಲೋಕಕ್ಕೂ ಉಣಿಸಬೇಕೆಂದು ಮನ ಮಾಡಿದನಂತೆ ಗುರುವಾಯುಪುರವಾಸನಾದ ಲೀಲಾವಿನೋದಿ ಶ್ರೀಕೃಷ್ಣ.

ಅಸಹನೀಯವಾದ ರೋಗ ಪೀಡೆಯಿಂದ ನರಳುತ್ತಿದ್ದ ಭಟ್ಟಪಾದರು ದಿನಂಪ್ರತಿ ತಮ್ಮ ಭಕ್ತಿಕುಸುಮದ ಸ್ತೋತ್ರಮಾಲೆಯನ್ನು ವಾತಾಲಯೇಶನಿಗೆ ಅರ್ಪಿಸುತ್ತಿದ್ದರು. ಆದರೂ ರೋಗ ಶಮನದ ಚಿಹ್ನೆ ಕಾಣಲಿಲ್ಲ. ನಿರಾಶರಾಗದೆ ಭಜನೆಯನ್ನು ಮುಂದುವರಿಸಿದರು. ದಿನದಿನವೂ ಬೇಗುದಿ ಹೆಚ್ಚುತ್ತಿದ್ದಂತೆ, ಯಾತನೆ ಮೀರುತ್ತಿದ್ದಂತೆ, ಭಕ್ತಿಯ ತೀವ್ರತೆಯೂ ಅಧಿಕವಾಗುತ್ತಿತ್ತು. ಪ್ರಾರ್ಥನೆ ಮುಂದುವರಿದಿತ್ತು. ಭಟ್ಟಪಾದರ ಈ ಪರಿಸ್ಥಿತಿಯನ್ನು ಕಂಡು ಕರಗಿದ ಶ್ರೀಕೃಷ್ಣವಲ್ಲಭೆಯರಾದ ರುಕ್ಮಿಣೀ ಮೊದಲಾದ ದೇವಿಯರು, ತಮ್ಮ ಪ್ರಾಣವಲ್ಲಭನಾದ ಭಗವಂತನನ್ನು ಆಕ್ಷೇಪಿಸಿದರಂತೆ "ಕರುಣಾಸಾಗರ, ಭಕ್ತವತ್ಸಲ, ದೀನಬಂಧು, ಆರ್ತತ್ರಾಣ ಪರಾಯಣ ಎಂಬ ಬಿರುದುಗಳನ್ನು ಹೊಂದಿ, ವೇದಪುರಾಣಗಳಿಂದ ಸ್ತುತಿಸಲ್ಪಡುವವನೆ, ಈ ವಿಪ್ರನು ಅದೆಷ್ಟು ದಿನಗಳಿಂದ ದೀನನಾಗಿ ಪ್ರಾರ್ಥಿಸುತ್ತಿದ್ದಾನೆ. ಭಕ್ತರ ಕಣ್ಣೀರನ್ನು ಸಹಿಸದ ನೀನು ಕಠಿಣ ಹೃದಯನಾಗಿ ಆತನನ್ನು ಅನುಗ್ರಹಿಸದೆ ಉದಾಸೀನನಾಗಿರುವೆಯಲ್ಲ! ಆತನ ಪ್ರಾಣ ಸಂಕಟದ ಕೂಗು ನಿನ್ನನ್ನೇಕೆ ಕರಗಿಸಲಿಲ್ಲ ಪ್ರಭೂ? ಅವನ ಭಕ್ತಿ ಕಪಟವೇ? ಕಡಿಮೆಯೇ? ಲೀಲಾಲೋಲನೇ! ನಿನ್ನ ಈ ಲೀಲೆಯ ಮರ್ಮವೇನು?"

ನಕ್ಕು ನುಡಿದ ಶ್ರೀಕೃಷ್ಣ–"ಪ್ರಿಯ ದೇವಿಯರೇ, ನೀವೆನ್ನುವುದೆಲ್ಲವೂ ಸರಿ. ಭಟ್ಟತ್ತಿರಿಯ ಬಗ್ಗೆ ನನಗೆ ಉದಾಸೀನವಿಲ್ಲ. ಅವನ ಭಕ್ತಿಯ ಸ್ತೋತ್ರಗಳು ನನಗೆ ರಸದೂಟವಾಗಿದೆ. ನನ್ನ ಅನುಗ್ರಹ ಆತನಿಗೆ ಇದ್ದೇ ಇದೆ".

"ಹಾಗಾದರೆ ರೋಗವನ್ನು ನಿವಾರಿಸಿ, ಅನುಗ್ರಹಿಸುವುದಕ್ಕೇಕೆ ವಿಳಂಬ?"

"ಇನ್ನೂ ಅಮೂಲ್ಯವಾದ ಭಕ್ತಿ ಸುಧೆ ಆ ಹೃದಯದಿಂದ ಹರಿಯಲಿದೆ. ದೇಹ ಯಾತನೆಯಿಂದ ನರಳಿದಷ್ಟೂ ಭಕ್ತಿಭಾವದ ಮಾಧುರ್ಯ ವರ್ಧಿಸುತ್ತದೆ. ಅದನ್ನು ಸವಿಯುವ ಆಶೆಯಿಂದಲೇ ಇಷ್ಟು ವಿಳಂಬಮಾಡಿದೆ, ಇನ್ನು ತಡವಿಲ್ಲ." ಎಂದನಂತೆ ಶ್ರೀಕೃಷ್ಣ.

ಆನಂತರ ನೋವು ಸಹಿಸಲಸಾಧ್ಯವಾಗಿ ಬಾಹ್ಯ ಪ್ರಜ್ಞಾ ಪರಿಜ್ಞಾನಶೂನ್ಯರಾದ ಅವರ ಭಕ್ತಿಪರವಶ ಹೃದಯದಿಂದ ಹರಿದು ಬಂದ ಸ್ತೋತ್ರವೇ ಕೊನೆಯ ದಶಕ –

ಅಗ್ರೇ ಪಶ್ಯಾಮಿ ತೇಜೋ ನಿಬಿಡತರ
ಕಳಾಯಾವಲೀ ಲೋಭನೀಯಮ್ ।
ಪೀಯೂಷಾಪ್ಲಾವಿತೋಹಂ ತದನು
ತದುದರೇ ದಿವ್ಯಕೈಶೋರವೇಷಮ್ ॥
ತಾರುಣ್ಯಾರಂಭರಮ್ಯಂ ಪರಮಸುಖ
ರಸಾಸ್ವಾದ ರೋಮಾಂಚಿತಾಂಗೈಃ ।
ರಾವೀತಂ ನಾರದಾದ್ಯೈರ್ವಿಲಸ
ದುಪನಿಷತ್ ಸುಂದರೀ ಮಂಡಲೈಶ್ಚ ॥

ಎಂಬ ಆರಂಭದ ಶ್ಲೋಕದಲ್ಲಿ, ಶ್ಯಾಮಲಕೋಮಲಗಾತ್ರವೂ, ದಿವ್ಯಕೈಶೋರ ಮೂರ್ತಿಯೂ, ಆದ ಗುರುಪುರೇಶನ ದಿವ್ಯಶಾಂತಿಯುಕ್ತವಾದ ಸ್ವರೂಪವನ್ನು ಸಮಗ್ರವಾಗಿ, ಕಣ್ಣಿಗೆ ಕಟ್ಟುವಂತೆ ವರ್ಣಿಸಿದ್ದಾರೆ. ಮುಂದಿನ ಶ್ಲೋಕಗಳಲ್ಲಿ ಮುರಲೀ ಮನೋಹರನಾದ ಶ್ರೀಕೃಷ್ಣಪರಮಾತ್ಮನ ದಿವ್ಯ ವಿಗ್ರಹದ ಕೇಶಾದಿ ಪಾದವರ್ಣನೆಯ ಮೂಲಕ ಸ್ತೋತ್ರ ಮಾಡಿದ್ದಾರೆ.

ಯೋಗೀಂದ್ರಾಣಾಂ ತ್ವದಂಗೇಷ್ವಧಿಕ
ಸುಮಧುರಂ ಮುಕ್ತಿಭಾಜಾಂ ನಿವಾಸೋ ।

( 8 ನೇ ಪುಟ ನೋಡಿ )

## ಪ್ರಕಟಣೆ

ತಿರುಮಲೆ ತಿರುಪತಿ ದೇವಸ್ಥಾನಗಳವರು, ತಿರುಮಲೆಗೆ ಹೋಗುವ ಘಾಟ್ ರಸ್ತೆಯಲ್ಲಿ ಕೆಟ್ಟುನಿಂತ ವಾಹನಗಳ ಅಗತ್ಯ ದುರಸ್ತಿಗಾಗಿ, ಸರಸವಾದ ದರಗಳಲ್ಲಿ ಕೆಲಸಮಾಡುವ ಒಂದು ಸಂಚಾರೀ ದುರಸ್ತಿ ವಾಹನವನ್ನು ಏರ್ಪಾಡು ಮಾಡಿರುತ್ತಾರೆ. ಈ ವಾಹನವು ಎಲ್ಲ ದಿನಗಳಲ್ಲೂ ಬೆಳಗ್ಗೆ 9 ಗಂಟೆಯಿಂದ ಸಂಜೆ 6 ಗಂಟೆಯವರೆಗೆ, ತಿರುಪತಿಯ ಅಲಿಪಿರಿ ಟೋಲ್ ಗೇಟಿನಲ್ಲಿಯಾಗಲೀ ಅಥವಾ ತಿರುಮಲೆಯ ಟೋಲ್‌ಗೇಟಿನಲ್ಲಿಯಾಗಲೀ ದೊರೆಯುವಂತೆ ಏರ್ಪಾಡು ಮಾಡಲಾಗಿದೆ. ಹಾಗಾಗಿ ತಮ್ಮ ವಾಹನಗಳನ್ನು ದುರಸ್ತಿ ಮಾಡಿಸಿಕೊಳ್ಳ ಬಯಸುವವರು ಮೇಲ್ಕಂಡ ಟೋಲ್‌ಗೇಟ್‌ಗಳಲ್ಲಿನ ಸಿಬ್ಬಂದಿಯನ್ನು ವಿಚಾರಿಸಿ ಈ ಸೇವಾಸದುಪಾಯದ ಅನುಕೂಲ ಪಡೆಯಬಹುದು.

–ತಿ. ತಿ. ದೇ.

# ಶ್ರಿಯಃಪತಿ

"ಚಿದಚಿದ್ವಿಶಿಷ್ಟಃ ಶ್ರೀಮನ್ನಾರಾಯಣನೇ ಪರಬ್ರಹ್ಮ" ಎಂದು ಉದ್ಘೋಷಿಸಿದವರು ಭಗವದ್ರಾಮಾನುಜರು, ಶ್ರಿಯಃಪತಿ ಸಿದ್ಧಾಂತ ಸ್ಥಾಪನಾಚಾರ್ಯರು. ವೇದ, ಉಪನಿಷತ್ತು, ರಾಮಾಯಣ, ಭಗವದ್ಗೀತೆ ಮತ್ತು ಆಳ್ವಾರುಗಳ ನಾಲ್ಕು ಸಾವಿರ ದ್ರಾವಿಡ ದಿವ್ಯಪ್ರಬಂಧಗಳ ಆಳವಾದ ಅಭ್ಯಾಸ, ಯಾಮುನಾಚಾರ್ಯರು, ನಾಥಮುನಿಗಳು ಮುಂತಾದವರ ಸೂಕ್ತಿಗಳು ಮತ್ತು ಉಪದೇಶಗಳ ಪ್ರಭಾವ, ಹಾಗೆಯೇ ತಮ್ಮ ಸ್ವಂತ ತಪೋನಿಷ್ಠೆ – ಇವುಗಳ ಫಲವಾಗಿ ತಮ್ಮ ದರ್ಶನವನ್ನು ಜಗತ್ಪ್ರಸಿದ್ಧ ಪಡಿಸಿದರು. 'ಶಾಸ್ತ್ರಜ್ಞಾನಂ ಬಹುಕ್ಲೇಶಂ ಬುದ್ಧೇಃ ಜಲನಕಾರಣಂ' ಎಂಬ ಅನುಭವವನ್ನು ಮನಸ್ಸಿನಲ್ಲಿಟ್ಟುಕೊಂಡು ಸಕಲಚೇತನರ ಉದ್ಧಾರಕ್ಕಾಗಿ "ಉಪದೇಶಾತ್ ಹರಿಂ ಬುಧ್ವಾ ವಿರಮೇತ್ ಸರ್ವಕರ್ಮಸು" ಎಂಬ ಉಪದೇಶವಾಕ್ಯವನ್ನು ಎತ್ತಿಹಿಡಿದರು. ತ್ರಿಮೂರ್ತಿಗಳಾದ ಹರಿಹರ ಬ್ರಹ್ಮಾದಿಗಳಲ್ಲಿನ ಪರಮಾತ್ಮತತ್ತ್ವವನ್ನು ಶ್ರೀಹರಿಯಲ್ಲಿ ಗುರುತಿಸಿ, ಅವನ ಆಧೇಯತ್ವ ನಿಯಾಮ್ಯತ್ವಗಳಲ್ಲಿ ಉಳಿದೆರಡು ರೂಪಗಳನ್ನು ವಿಲೀನಗೊಳಿಸಿ, ಶ್ರೀಮನ್ನಾರಾಯಣನೇ ಪರತತ್ತ್ವವೆಂದು ನಿರ್ಧರಿಸಿದರು. 'ಸತ್ಯಂ ಸತ್ಯಂ ಪುನಃ ಸತ್ಯಂ ನ ದೈವಂ ಕೇಶವಾತ್ಪರಂ' ಎಂದು ಭುಜಗಳೆರಡನ್ನೂ ಮೇಲಕ್ಕೆತ್ತಿ ಉದ್ಘೋಷಿಸಿದ ಸಂತರವಾಕ್ಯವನ್ನು ಎತ್ತಿಹಿಡಿದರು. ಅಷ್ಟೇ ಅಲ್ಲ, ಸಂಭಾವಿತರು ಸ್ಪಷ್ಟಪಡಿಸಿದ "ನಾರಾಯಣೇತಿ ನಾಮೋಸ್ತಿ ವಾಗಸ್ತಿ ವಶವರ್ತಿನೀ। ತಥಾಪಿ ನರಕೇ ಘೋರೇ ಪತಂತೀತ್ಯೇತದದ್ಭುತಮ್ ॥" ಎಂಬ ಭಾವನೆಗೆ ಓಗೊಡುತ್ತ ಸಕಲ ಜೀವರುಗಳ ಉದ್ಧಾರಕ್ಕಾಗಿ ಮಹಾಮಂತ್ರವನ್ನು ಬಚ್ಚಿಡದೇ ಎಲ್ಲರ ಮುಂದೆ ಬಯಲು ಪಡಿಸಿದರು.

"ನಾರಾಯಣಾಯ ವಿದ್ಮಹೇ ವಾಸುದೇವಾಯ ಧೀಮಹೀ ತನ್ನೋ ವಿಷ್ಣುಃ ಪ್ರಚೋದಯಾತ್" ಶ್ರೀಮನ್ನಾರಾಯಣನೇ ಶ್ರೀವಾಸುದೇವ, ಶ್ರೀಮಹಾವಿಷ್ಣು, ಈತನೇ ಪರಬ್ರಹ್ಮ. ಈತನು ಶ್ರೀ ವಿಶಿಷ್ಟನಾದವನು. ಶ್ರೀದೇವಿಯು ಅನಪಾಯಿನಿಯಾಗಿ ಸರ್ವದೇಶ, ಸರ್ವಕಾಲ, ಸರ್ವಾವಸ್ಥೆಗಳಲ್ಲಿಯೂ ಅವನ ವೃತ್ಯಸುಲಸ್ಥಳಾಗಿದ್ದಾಳೆ. ಶ್ರಿಯಃಪತಿತ್ವವು ಶ್ರೀಮನ್ನಾರಾಯಣನನ್ನು ಇತರದೇವತೆಗಳಿಂದ ಪೃಥಕ್ಕರಿಸಿ ಪರತತ್ತ್ವವನ್ನು ದೃಢಪಡಿಸತಕ್ಕ ಅಂಶವಾಗಿದೆ. ಶ್ರೀಮನ್ನಾರಾಯಣನು ವಾಮನರೂಪಿಯಾಗಿ, ಬಲಿಯ ಸಭೆಗೆ ಆಗಮಿಸಿದನು. ಆಗಲೂ ಶ್ರೀದೇವಿಯು ಅವನ ಹೃದಯಸ್ಥಾನದಿಂದ ಅಗಲಲಿಲ್ಲ. ವಟುವಾಗಿದ್ದರೂ ವಧುವನ್ನು ಹೊತ್ತೇ ಸಭೆಗೆ ಬಂದ. ಅವಳನ್ನು ಮರೆಮಾಡಲು ಕೃಷ್ಣಾಜಿನದಿಂದ ತನ್ನ ವಕ್ಷಸ್ಥಲವನ್ನು ಮುಚ್ಚಿಕೊಂಡನಂತೆ. ಆದಾಗ್ಯೂ ಅವಳ ವರ್ಚಸ್ಸು ಅವನ ಮುಖದಲ್ಲಿ ಸ್ಫುಟವಾಗಿ ಒಡೆದು ಮೂಡಿತು. ಚಾಣಾಕ್ಷರೂ, ಸನ್ಮತಿಗಳೂ ಆದ ಶುಕ್ರಾಚಾರ್ಯರು ಇದನ್ನು ಕಂಡುಹಿಡಿದು ತನ್ನ ರಾಜನನ್ನು ಎಚ್ಚರಿಸಿದರು. ತೇಜೋಮಯವಾದ. ಅನಿರ್ವಚನೀಯವಾದ ಆ ಬಾಲವಟುವನ್ನು ನೋಡಿ ಪುಳಕಿತನಾಗಿದ್ದ ಬಲಿಚಕ್ರವರ್ತಿಯು ಗುರುಗಳ ಉಪದೇಶದಿಂದ ಹರ್ಷವಿಸ್ಮಿತನಾಗಿ, ಆನಂದಸಾಗರದಲ್ಲಿ ಮುಳುಗಿ "ಅಹೋ ಭಾಗ್ಯಂ ಅಹೋ ಭಾಗ್ಯಂ" ಎಂದು ಮಾನಸಿಕವಾಗಿ ಉದ್ಗಾರತೆಗೆದು ಪರಬ್ರಹ್ಮನಿಗೆ ತನ್ನ ಸರ್ವಸ್ವವನ್ನೂ ನೀಡಲು ಸಿದ್ಧನಾದ. ಈ ಆಶ್ಚರ್ಯಕರವಾದ ಘಟನೆಗೆ ಶ್ರೀಹರಿಯ ಶ್ರಿಯಃಪತಿತ್ವವೇ ಕಾರಣ. ಜೀವಮಾತ್ರನ ಸಂಪತ್ತು ಶ್ರಿಯಃಪತಿಯ ಸಂಪತ್ತಿನ ಮುಂದೆ ಅಣುಪ್ರಾಯ.

ಪರತತ್ತ್ವವು ಅನಾದಿ, ಅನಂತ, ಅಜ, ಅಮರ. ಪರತತ್ತ್ವದ ನೆಲೆಯನ್ನು ಅರಿಯಲು ಹೋದ ಜನರಿಗೆ ಸ್ಫುರಿಸಿದುದು ಬೀಜವೃಕ್ಷನ್ಯಾಯ. ಪರತತ್ತ್ವ–ಪ್ರಪಂಚ ಇವು ಬಿಡಿಸಲಾಗದ ಒಗಟು, ಅಧ್ಯಾತ್ಮತತ್ತ್ವವು ಅಧ್ಯಯನಕ್ಕೆ ಬಹುಕ್ಲೇಶವಾದುದು. ಈ ವಿಚಾರದಲ್ಲಿ ವೇದ ಪುರಾಣಾದಿಗಳ ನಿರೂಪಣವು ಅವಿಚಾರರಮಣೀಯವಾದುದು. ಆದ್ದರಿಂದಲೇ ಈ ಬ್ರಹ್ಮವಿಚಾರವನ್ನು ಸದ್ಗುರೂಪದೇಶದಿಂದಲೂ, ಮಹಾವಿಶ್ವಾಸದಿಂದಲೂ ಮನಸ್ಸಿನಲ್ಲಿ ದೃಢವಾಗಿ ನಾಟಿಸಿಕೊಳ್ಳಬೇಕು. ಅಸ್ತಿ, ನಾಸ್ತಿಗಳ ವಿವಾದ ಇಲ್ಲಿಲ್ಲ; ಅಸ್ತ್ಯೇವ, ಅದು ಶ್ರಿಯಃಪತಿಯೇ, ಇಲ್ಲಿ ಶ್ರಿಯಃಪತಿಯು ಒಂದೇ ಅವಿಭಾಜ್ಯತತ್ತ್ವ; ಶ್ರೀ – ಪತಿ ಎಂಬ ಎರಡು ವಿಭಾಜ್ಯ ತತ್ತ್ವವಲ್ಲ.

ಅಧ್ಯಾತ್ಮಶಾಸ್ತ್ರದಲ್ಲಿ ಲೀಲಾವಿಭೂತಿ, ನಿತ್ಯವಿಭೂತಿ ಎಂದು ಉಲ್ಲೇಖವಾಗಿರುವುದನ್ನು ಸಾಮಾನ್ಯ ಬಳಕೆಯಲ್ಲಿ ಇಹ, ಪರ ಎಂದು ಹೇಳುತ್ತೇವೆ. ಲೀಲಾವಿಭೂತಿಯಲ್ಲಿ ಶ್ರಿಯಃಪತಿ ತತ್ತ್ವವನ್ನು ಸಕಲಚರಾಚರಗಳೂ ಪ್ರತ್ಯಕ್ಷಿಸಿ ನೋಡುವಂತಾದುದು ಆ ಭಗವಂತನ ಕಪಟನಾಟಕ ಅಭಿನಯರೂಪವಾದ ಅಮೃತಮಂಥನ ಕಾಲದಲ್ಲಿ. ಭೃಗುಮಹರ್ಷಿಗಳಿಂದ ಎದೆಗೆ ಒದೆಸಿಕೊಂಡು, ಶ್ರೀದೇವಿಯಿಂದ ವಿರಹಿತನಾದ ಶ್ರೀವಿಷ್ಣು, ಲೀಲಾವಿಭೂತಿಯು ಆಗ ನಿಃಶ್ರೀಕವಾಯಿತು. ಗಾಬರಿಯಿಂದ ಹರಿಹರ ಬ್ರಹ್ಮಾದಿ ಸಮೇತ ಸುರಾಸುರರು ಅಮೃತಪ್ರಾಪ್ತಿಗೂ, ಶ್ರೀದೇವಿಯ ದರ್ಶನಕ್ಕೂ ಕ್ಷೀರಸಾಗರದ ಮಥನಕ್ಕೆ ಆರಂಭಿಸಿದರು. "ತೇನ ವಿನಾ ತೃಣಮಪಿ ನ ಚಲತಿ". ಕಡೆಗೋಲಾದ ಮಂಧರ ಪರ್ವತಕ್ಕೆ ನಿಲ್ಲಲು ನೆಲೆಯಿಲ್ಲದೆ ಮುಳುಗಲಾಗಿ ಬ್ರಹ್ಮರುದ್ರೇಂದ್ರಾದಿಗಳು ನಿಷ್ಕ್ರಿಯರಾದಾಗ, ಮಹಾವಿಷ್ಣುವೇ ಮುಂದಾಗಿ ಕೂರ್ಮರೂಪದಿಂದ ಮಂಥನದಂಡವನ್ನು ಹೊತ್ತು, ಕೇಶವರೂಪಿಯಾಗಿ, ಆ ಪರ್ವತದ ಮೂರ್ಧ್ನಿಯನ್ನು ಹಿಡಿದು, ಸುರಾಸರರ ಜೊತೆ ಅಜಿತರೂಪನಾಗಿ, ಕಡೆಯುವ ಹಗ್ಗವಾದ ವಾಸುಕಿಯನ್ನು ಹಿಡಿದು ಅಮೃತಮಂಥನ ನಾಟಕವನ್ನು ಅಭಿನಯಿಸಿದನು. ಈ ಅಭಿನಯವು ಸಕಲಸೃಷ್ಟಿ ವೈಚಿತ್ರ್ಯಕ್ಕೂ ಶ್ರಿಯಃಪತಿಯೇ ಆದಿಮಧ್ಯಾಂತ ಕಾರಣನೆಂಬ ಸತ್ಯಾಂಶವನ್ನು ಸ್ಪಷ್ಟಪಡಿಸಿತು. ಆ ಅಭಿನಯಕಾಲದಲ್ಲಿ ಶ್ರೀ ಮಹಾಲಕ್ಷ್ಮಿಯು

ಶ್ರೀ ಎಸ್. ನರಸಿಂಹಾಚಾರ್

ಕ್ಷೀರಸಾಗರದ ಮಧ್ಯದಲ್ಲಿ ಅಮೃತೋದ್ಭವೆಯಾಗಿ ಎಲ್ಲರ ದೃಷ್ಟಿಗೆ ಗೋಚರಿಸುತ್ತ, ಎಲ್ಲರ ಕುತೂಹಲವನ್ನೂ ಕೆರಳಿಸುತ್ತ ನೇರವಾಗಿ ಅಜಿತರೂಪಿಯಾದ ಮಹಾವಿಷ್ಣುವಿನ ಕೊರಳಿಗೆ ವರಮಾಲಿಕೆಯನ್ನು ಹಾಕಿ ಅವನ ಹೃದಯಕಮಲದ ಪೀಠದಲ್ಲಿ ಪ್ರತಿಷ್ಠಿತಳಾದಳು, ಸಕಲ ಚರಾಚರಗಳಿಗೂ ಪರತತ್ತ್ವವು ಶ್ರೀ ವಿಶಿಷ್ಟವಾದುದು ಎಂದು ದೃಢ ಪಡಿಸಿದಳು.

ಲೀಲಾವಿಭೂತಿಯ ಚರಾಚರಸೃಷ್ಟಿಗಳ ಅಂತಿಮಗುರಿ ನಿತ್ಯವಿಭೂತಿಯನ್ನು ಹೊಂದಿ, ಶ್ರಿಯಃಪತಿಯ ಕೈಂಕರ್ಯದಲ್ಲಿ ತೊಡಗಿ ಆನಂದಾನುಭವನಾಡುವುದು. "ರಸೋ ವೈ ಸಃ" – ಈ ಗುರಿಯನ್ನು ಹೊಂದಲು ಅವಳೇ ದಿಗ್ದರ್ಶಕಳು. ಅವಳ ಕಟಾಕ್ಷ ವೀಕ್ಷಣವೇ ನಮಗೆ ಮೋಕ್ಷಹೊಂದುವುದಕ್ಕೂ, ಭಗವಂತನು ಮೋಕ್ಷಪ್ರದನಾಗುವುದಕ್ಕೂ ಕಾರಣ. "ಮೋಕ್ಷಮಿಚ್ಛೇತ್ ಜನಾರ್ದನಾತ್". ಅವಳ ಕೃಪೆಯೇ ಅವನ ಕೃಪೆ. ಅವಳು ಸಕಲ ಭುವನ ಪ್ರಾರ್ಥನಾ ಕಾಮಧೇನು-ವಾದ್ದರಿಂದಲೇ ಶ್ರಿಯಃಪತಿಯು "ಅಪವರ್ಗಪ್ರದೋ ಹರಿಃ" ಆದನು. ಶ್ರಿಯಃ ಪತಿಯ ಕರುಣಾಸ್ರೋತ್ರವು ಎಲ್ಲರ ಮೇಲೂ ಪ್ರವಹಿಸಲಿ.

——

(6ನೇ ಪುಟದಿಂದ)

ಭಕ್ತಾನಾಂ ಕಾಮವರ್ಷದ್ಯುತರು
ಕಿಸಲಯಂ ನಾಥ! ತೇ ಪಾದಮೂಲಮ್ ।
ನಿತ್ಯಂ ಚಿತ್ತ ಸ್ಥಿತಂ ಮೇ ಪವನ
ಪುರಪತೇ ಕೃಷ್ಣ! ಕಾರುಣ್ಯಸಿಂಧೋ! ।
ಹೃತ್ವಾ ನಿಶ್ಶೇಷ ತಾಪಾನ್ ಪ್ರದಿಶತು
ಪರಮಾನಂದ ಸಂದೋಹ ಲಕ್ಷ್ಮೀಮ್ ॥

(ನಾರಾಯಣೀಯಂ ದಶಕ 100 ಶ್ಲೋಕ–10) ಪರಮಾತ್ಮನ ದಿವ್ಯ ಪಾದಾರವಿಂದದ ಮಹಿಮಾತಿಶಯದ ವರ್ಣನೆಯನ್ನೊಡಗೂಡಿದ, ಆತ್ಮಸಮರ್ಪಣಭಾವದಿಂದ ಕೂಡಿದ ತೀವ್ರ ಭಕ್ತಿಯ ಕಳಕಳಿಯ ಪ್ರಾರ್ಥನೆಯಾದ ಈ ಹತ್ತನೇ ಶ್ಲೋಕದ ಅಂತ್ಯ ಚರಣಗಳನ್ನು ಹಾಡುತ್ತಿದ್ದಂತೆ ಭಗವಂತನು ಭಟ್ಟಪಾದರಿಗೆ ದೃಷ್ಟಿಗೋಚರನಾಗಿ ಅನುಗ್ರಹಿಸಿದನೆಂದು ತಿಳಿದುಬರುತ್ತದೆ.

'ನಾರಾಯಣೀಯಂ' ಗುರುಪುರೇಶನ ಪ್ರೇರಣೆಯಿಂದಲೇ ರಚಿತವಾದ, ಭಗವಂತನಿಗೆ ಸಮ್ಮತವಾದ ಸ್ತೋತ್ರ ಎನ್ನುವುದಕ್ಕೆ ಇನ್ನೂ ಅನೇಕ ಉದಾಹರಣೆಗಳಿವೆ. ಅವರು ಭಗವಂತನ ವಿಗ್ರಹದ ಎದುರಾಗಿ ಕುಳಿತು, ವಿಗ್ರಹದ ಮುಖವನ್ನು ದಿಟ್ಟಿಸುತ್ತಾ, ಪ್ರಾರ್ಥಿಸುತ್ತಾ ಸ್ತೋತ್ರ ರಚನೆ ಮಾಡುತ್ತಿದ್ದರು. ಅನೇಕ ಕಡೆ ಸಂದೇಹ ಬಂದಾಗ ಅದು ಭಗವಂತನಿಂದಲೇ ನಿವಾರಣೆಯಾಯಿತೆಂದೂ ಸ್ಥಳ ಮಹಾತ್ಮೆಯ ಇತಿಹಾಸದಿಂದ ತಿಳಿದುಬರುತ್ತದೆ.

(1) ಸಪ್ತಮ ಸ್ಕಂಧದಲ್ಲಿ – ನರಸಿಂಹಾವತಾರದ ವರ್ಣನೆ ಮಾಡಲು ತೋಚದೆ ತೊಳಲಾಡಿ ಪ್ರಾರ್ಥಿಸಿದರಂತೆ. ಆಗ ಗರ್ಭಗುಡಿಯ ಮುಂಭಾಗದ ಮಂಟಪದ ಕಂಬದಲ್ಲಿ ಅವರಿಗೆ ನರಸಿಂಹಾಕೃತಿ ಗೋಚರಿಸಲು "ಸ್ತಂಭೇ ಘಟ್ಟಯತೋ, ಹಿರಣ್ಯಕಶಿಪೋ......" ಎಂಬುದಾಗಿ ವರ್ಣನೆ ಮಾಡಿದರಂತೆ (25ನೇ ದಶಕ )

(2) ರಾಮಾಯಣ ಕಥಾನಿರೂಪಣೆ ಮಾಡುವಾಗ (34ನೇ ದಶಕ) "ಜಾತೋ ರಾಮ"ಎಂದು ವರ್ಣಿಸುತ್ತಾ ಭಗವಂತನ ಮುಖ ನೋಡಿದಾಗ "ಆ ರಾಮನೂ ನಾನೇ" ಎಂದು ನುಡಿದಂತಾಗಲು "ಜಾತೋ ರಾಮಸ್ತ್ವಂ" ಎಂಬುದಾಗಿ ಸರಿಪಡಿಸಿ ಮುಂದುವರಿದರಂತೆ.

35ನೇ ದಶಕದಲ್ಲಿ ಗರ್ಭಿಣಿ ಸೀತಾದೇವಿಯನ್ನು ಕಾಡಿಗೆ ಕಳುಹಿಸಿದ ಸನ್ನಿವೇಶವನ್ನು ನಿರೂಪಿಸುತ್ತಾ "ಪಾಪ ವಾಚಾ ಶಿವ! ಶಿವ! ಗರ್ಭಿಣೀಮಭ್ಯಹಾಸೀ..."ಎಂಬಲ್ಲಿ ನೀನು ಇಂಥ ನಿಷ್ಕರುಣೆಯೇ ಎಂಬ ಭಾವನೆ ವ್ಯಕ್ತಪಡಿಸಿದಾಗ "ಅದು ನಾನಲ್ಲ–ರಾಮ." ಎಂದಂತಾಯಿತಂತೆ

(3) 47ನೇ ದಶಕದಲ್ಲಿ–

"ಸಾಮಿಪೀತ ರಸಭಂಗ ಸಂಗತ।
ಕ್ರೋಧಭಾರ ಪರಿಭೂತಚೇತಸಾ।
ಮಂಥದಂಡಮುಪಗೃಹ್ಯ ಪಾಟಿತಮ್ ।
ಹಂತ! ದೇವ ದಧಿಭಾಜನಂ ತ್ವಯಾ ॥"

ಎಂಬ ಶ್ಲೋಕವಿದೆ ಸ್ತನ್ಯಪಾನ ಮಾಡುತ್ತಿದ್ದ ಬಾಲಕೃಷ್ಣನು ತೃಪ್ತಿಹೊಂದುವ ಮೊದಲೇ ಯಶೋದೆಯು ಅವನನ್ನು ಕೆಳಗಿಳಿಸಿ ತನ್ನ ಕೆಲಸಕ್ಕೆ ಹೋಗಲು, ಸಿಟ್ಟುಗೊಂಡ ಕೃಷ್ಣನು ಮೊಸರಿನ ಪಾತ್ರೆಯನ್ನು ಒಡೆಯುವ ಘಟನೆ. ಭಟ್ಟತ್ತಿರಿ "ಮಂಥದಂಡಮುಪಗೃಹ್ಯ ಪಾಟಿತಮ್" ಎಂದು ವರ್ಣಿಸುವಷ್ಟರಲ್ಲಿ ಭಾಗವತದಲ್ಲಿ 'ಮಂಥದಂಡ' (ಕಡೆಗೋಲು) ಎಂಬ ಪದ ಉಪಯೋಗಿಸಿಲ್ಲವಲ್ಲ ಎಂದು ಪ್ರಮಾದಭೀತಿಯಿಂದ 'ಹಂತದೇವ!' ಎಂದು ಉಚ್ಚರಿಸುತ್ತಿರಲು, "ನಾನು ಕಡೆಗೋಲಿನಿಂದಲೂ ಒಡೆದಿದ್ದೇನೆ ಭಟ್ಟರೇ" ಎಂದು ಮುದ್ದ ಬಾಲ ಗುರುಪುರೇಶ ಮುದ್ದು ಮುದ್ದಾಗಿ ಹೇಳಿ ಸಂತೈಸಲು, "ದಧಿಭಾಜನಂ ತ್ವಯಾ" ಎಂಬುದಾಗಿ ಶ್ಲೋಕ ಪೂರ್ತಿಗೊಳಿಸಿದರಂತೆ.

ಇನ್ನು ವತ್ಸಸ್ತೇಯ, ರಾಸಕ್ರೀಡೆ ಮೊದಲಾದ ಲೀಲೆಗಳನ್ನು ವರ್ಣಿಸುವಾಗ, ಕರುಣಾಮೂರ್ತಿಯಾದ ಭಗವಂತ ಅವರ ಕಣ್ಮುಂದೆ ಆ ಲೀಲೆಗಳನ್ನು ತೋರಿಸಿರಬಹುದೆಂಬುದರಲ್ಲಿ ಸಂದೇಹವಿಲ್ಲ.

ಶ್ರೀಮನ್ನಾರಾಯಣನ ಅವತಾರ, ಲೀಲಾ ವರ್ಣನೆಗಳನ್ನೊಳಗೊಂಡ ಪುಣ್ಯ ಗ್ರಂಥವಾದ ಭಾಗವತವನ್ನು ಭಟ್ಟಪಾದರು ಭಟ್ಟಿಯಿಳಿಸಿ ಸ್ತೋತ್ರರೂಪದಲ್ಲಿ ಹಾಡಿದರು. ನಾರಾಯಣನ ಕಥೆಯಾದ್ದರಿಂದ 'ನಾರಾಯಣೀಯಂ' ಎಂದು ಒಂದು ರೀತಿಯಲ್ಲಿ ಹೇಳಬಹುದಾದರೆ– ಸ್ತೋತ್ರ ರಚಿಸಿದ ಭಟ್ಟಪಾದರೂ 'ನಾರಾಯಣ' ಎಂಬ ಅಂಕಿತನಾಮವುಳ್ಳವರಾದುದರಿಂದ ಎರಡೂ ರೀತಿಯಲ್ಲಿ ಅದು 'ನಾರಾಯಣೀಯಂ' ಎಂಬ ಹೆಸರಿಗೆ ತಕ್ಕುದಾಗಿದೆ. 'ದ್ವೇಧಾ ನಾರಾಯಣೀಯಂ' ಎಂಬುದಾಗಿ ಅವರೇ ಕೊನೆಯ ಶ್ಲೋಕದಲ್ಲಿ ಆ ಹೆಸರಿನ ಔಚಿತ್ಯವನ್ನು ಎತ್ತಿತೋರಿಸಿದ್ದಾರೆ.

ಆರೋಗ್ಯವನ್ನು ಮರಳಿ ಪಡೆದ ಅವರು ಗುರುವಾಯೂರಿನಿಂದ ಮರಳಿದರು. ಕೇರಳದ ನಾನಾ ಭಾಗಗಳಲ್ಲಿ ಸಂಚಾರಮಾಡಿ ಭಕ್ತಿಯನ್ನು ಬಿತ್ತರಿಸಿದರು. ಅನೇಕ ರಾಜರುಗಳ ಸ್ನೇಹ ಸೌಹಾರ್ದಗಳಿಗೆ ಪಾತ್ರರಾದರು. ಅವರಲ್ಲಿ ಭಕ್ತಶಿರೋಮಣಿಯಾದ ಅಂಬಲಪ್ಪುಳೆಯ ದೇವನಾರಾಯಣ ಎಂಬ ರಾಜನಲ್ಲಿ ಭಟ್ಟತ್ತಿರಿಯವರಿಗೂ ಅಪಾರ ಗೌರವವಿತ್ತು

ಪಂಡಿತ–ಪಾಮರ ಭೇದವಿಲ್ಲದೆ ಎಲ್ಲರಿಂದಲೂ ಆದರಿಸಲ್ಪಟ್ಟ ನಾರಾಯಣಭಟ್ಟಪಾದರು ಹಾಗೂ ಅವರ ಸತ್ಕೃತಿಯಾದ ನಾರಾಯಣೀಯಂ ಇಂದಿಗೂ ಸರ್ವಾದರಣೀಯವಾಗಿದೆ. ಅದೊಂದು ಉತ್ತಮ ಸಾಹಿತ್ಯರತ್ನ! ಸಾಧಕಭಕ್ತರಿಗೆ ಕೈದೀವಿಗೆ!



## ಯಕ್ಷಗಾನ

# ಶ್ರೀ ವೇಂಕಟೇಶ ಮಹಾತ್ಮೆ

ಭಾರತೀಯ ಗ್ರಂಥಗಳಲ್ಲಿ ಪ್ರಪ್ರಾಚೀನತಮ ವೆನಿಸಿದ ವೇದವು ಧರ್ಮದ ಸೂಕ್ಷ್ಮರೂಪದ ಆಜ್ಞಾ ರೀತಿಯ ನಿರ್ಧಾರಕವಾಗಿ ಪ್ರಭುಸಮ್ಮಿತವೆಂದು, ಪುರಾಣಗಳು ನಯವಾಗಿ ನಾಜೂಕಾಗಿ ಧರ್ಮಗ ಳನ್ನು ವಿವರಿಸುವಂತೆ ಮಿತ್ರಸಮ್ಮಿತಗಳೆಂದು, ಕಾವ್ಯಗಳು ಕಾಂತೆಯಂತೆ ಮೃದು ಮಧುರವಾಗಿ ಬಣ್ಣಿಸುವುದರಿಂದ ಕಾಂತಾಸಮ್ಮಿತಗಳೆಂದು ಹೇಳುತ್ತಾರೆ. ವೇದಗಳಿಗೆ ಅನುಸಾರವಾಗಿ ಉಪನಿಷತ್ತುಗಳು, ಪುರಾಣಗಳಲ್ಲಿ ಮಹಾಪುರಾಣ ಮತ್ತು ಉಪಪುರಾಣಗಳು, ಕಾವ್ಯಗಳಲ್ಲಿ ಮಹಾ ಕಾವ್ಯಹಾಗೂ ಖಂಡಕಾವ್ಯಗಳೂ ಸೇರುತ್ತವೆ. ವೇದಾಧಾರವನ್ನು ಇತಿಹಾಸ ಪುರಾಣಗಳು ಅಭಿ ವೃದ್ಧಿ ಸುತ್ತವೆ; ಕಾವ್ಯಗಳು ವರ್ಣನಾತ್ಮಕವಾಗಿ ಮನಂಬುಗುವಂತೆ ಚಿತ್ತರಿಸಲಾಗಿವೆ. ಮೈಸೂರ ಜಯಚಾಮರಾಜೇಂದ್ರ ಗ್ರಂಥಮಾಲೆಯಲ್ಲಿ ನಾಲ್ಕು ವೇದಗಳು, ಹದಿನೆಂಟು ಮಹಾಪುರಾಣ ಗಳು, ಇತರ ಉಪಪುರಾಣಗಳು ಕನ್ನಡದಲ್ಲಿ ಅನು ವಾದಿತಗಳಾಗಿ ಪ್ರಕಟವಾಗಿವೆ. ಅಂತಹ ಮಹ ತ್ಕಾರ್ಯವು ಈಗಲೂ ಅಪೇಕ್ಷಣೀಯ. ಅಬಾಲವೃ ದ್ಧರೂ ಸುಲಭವಾಗಿ ತಿಳಿಯುವಂತೆ, ಎಲ್ಲರೂ ಪಡೆ ಯುವಂತೆ ಸುಲಭಕ್ರಯದಲ್ಲಿ ಪ್ರಾಚೀನ ಕೃತಿಗಳ ಪ್ರಕಟನೆ ಸದಾ ಸ್ವಾಗತಾರ್ಹ ! ಅವುಈಗ ದೊರೆ ಯುತ್ತಿಲ್ಲವೆಂದೂ, ಪುನರ್ಮುದ್ರಣಾರ್ಹಗಳೆಂದು ಇಲ್ಲಿ ಹೇಳಬಹುದಾಗಿದೆ. ಇತ್ತೀಚೆಗೆ ಕೆಲವರು ಪುರಾಣಗಳ ಅನುವಾದಕ್ಕೆಳಸಿದರೂ, ಮೊಟಕಾ ಗಿಯೋ, ಅಪೂರ್ಣವಾಗಿಯೋ, ಅಸಂಬದ್ಧವಾ ಗಿಯೋ ಸಾಗುತ್ತಾರೆ. ಸಾರಸಂಗ್ರಹವು ಆಳ ವಾದ, ಸಾಬೀತಾದ ಪರಿಚಯಕ್ಕೆ ಸಲ್ಲದು. ಮೈಸೂರ ಆಳಸಿಂಗಾರ್ಯರು ಅನುವಾದಿಸಿದ ರಾಮಾಯಣ, ಭಾರತ, ಭಾಗವತಗಳು, ಸರ್ವ ಸಂಗ್ರಾಹ್ಯಗಳಾಗಿವೆಯೆಂದು ಹೇಳಲಡ್ಡಿಯಿಲ್ಲ. ಈ ತೆರದಲ್ಲಿ ಪುರಾಣಗಳ – ಉಪನಿಷತ್ತುಗಳ ವೇದಗಳ ಯಥಾವತ್ತಾದ ಅನುವಾದಗಳೇ ಜನತೆ ಯಲ್ಲಿ ಧಾರ್ಮಿಕವಾದ ಆಸಕ್ತಿಯನ್ನು ಬೆಳೆಯಿಸುವು ದರಲ್ಲಿ ಸಹಾಯವಾಗಬಲ್ಲವು.

ಪುರಾಣಗಳಲ್ಲಿ ಹೇಳಿದ ಕತೆಗಳನ್ನು ಆಧರಿಸಿ, ಸಾರ್ವಕಾಲಿಕ ರಾಜರ ಚರಿತೆಗಳನ್ನು ಅದರಲ್ಲಿ ಸಮನ್ವಯಿಸಿ ಹಲವು ಮಹಾಕಾವ್ಯಗಳು ರಚಿತ ವಾಗಿವೆ. ಅವು ಕೆಲವೊಮ್ಮೆಸಾಕ್ಷಿಕವಾಗಿರುತ್ತವೆ. ಖಂಡ ಕಾವ್ಯಗಳನ್ನು ಸರಸವಾಗಿಯೆ ಸಾಧಾರ ವಾಗಿ ರಚಿಸಿದರೆ ಉಪಕಾರಕವಾಗುತ್ತದೆ. ಯಕ್ಷ ಗಾನಕೃತಿಗಳು ಖಂಡಕಾವ್ಯಗಳ ವರ್ಗಕ್ಕೆ ಸೇರು ತ್ತವೆ. ಒಂದು ಕತೆಯನ್ನು ಆರೇಳು ಗಂಟೆಗಳಲ್ಲಿ ಹಾಡಿ ಅಭಿನಯಿಸಿ, ಅರ್ಥವಿಸುವ ಅಗತ್ಯವನ್ನಿಲ್ಲಿ ಪೂರೈಸಲಾಗುತ್ತದೆ.

ಹರಿದಾಸರ ಕೆಲವು ಹಾಡುಗಳಂತೆ, ನಾಲ್ಕು ಸೊಲ್ಲುಗಳನ್ನು–ಅದೊಂದು ಭಾವ, ವರ್ಣನೆ, ಸಂವಾದಕ್ಕೆ ತಕ್ಕ ಬೇರೆ ಬೇರೆ ರಾಗ–ತಾಳಗ ಳಲ್ಲಿ–ರಚಿಸುವುದರಿಂದ ಕುಣಿತದ ವೈವಿಧ್ಯಕ್ಕೆ ಅನುವಾಗುತ್ತದೆ. ಪ್ರಾಚೀನದ ಹರಿದಾಸರ ಕೆಲವು ಕೃತಿಗಳು ವೇಣುಗೀತೆ, ಭ್ರಮರ ಗೀತೆ, ಗೋಪಿ ಗೀತೆ, ಯಕ್ಷಗಾನರೀತಿಯಲ್ಲಿ ಪೌರಾಣಿಕ ಕೃತಿ ಗಳೇ ಯಕ್ಷಗಾನ ಕೃತಿಗಳವುಗಳಾ ಕನ್ನಡ ಕವಿಚರಿತೆ, ಶಿವರಾಮಕಾರಂತರ ಯಕ್ಷಗಾನ ಬಯಲಾಟ ಇತ್ಯಾದಿಗಳಲ್ಲಿ ಯಕ್ಷಗಾನ ಕೃತಿಗಳ ವಿವರ ತಿಳಿಯಬರುತ್ತವೆ.

ಪ್ರಸ್ತುತ, ವೇಂಕಟಮಹಾತ್ಮೆ ಅಥವಾ ಪದ್ಮಾವತೀ ಪರಿಣಯವೆಂಬ ಕೃತಿಯ ಕಿಂಚಿತ್ಪರಿ ಚಯ ಬರೆಯಲಿದೆ. ಆ ಮೊದಲು ಯಕ್ಷಗಾನದ ಬಗೆಗಳು ಏನೆಂದು ತುಸು ಬರೆಯಬೇಕು.

ದ.ಕ. ಜಿಲ್ಲೆಯಲ್ಲಿಹಾಗೂ ಉ. ಕ. ಜಿಲ್ಲೆಯಲ್ಲಿ ಪ್ರಚುರವಿರುವ ಯಕ್ಷಗಾನವು ತೆಂಕುತಿಟ್ಟು ಮತ್ತು ಬಡಗುತಿಟ್ಟುಗಳೆಂದು ಪ್ರಭೇದಗಳು ಕೇಳುತ್ತವೆ. ಪಡುಗಟ್ಟದ ಮೇಲಿನ ಪ್ರದೇಶಗಳಲ್ಲಿ ದೊಡ್ಡಾಟ, ಮೂಡಲಪಾಯಗಳೆಂಬವು ಪ್ರಚುರದಲ್ಲಿವೆ. ಯಕ್ಷ ಗಾನ ಬಯಲಾಟಗಳು ಗಟ್ಟದಮೇಲಿನ ಪ್ರದೇಶ ದಿಂದ ದ. ಕ. ಜಿಲ್ಲೆ – ಉ. ಕ. ಜಿಲ್ಲೆಗಳಿಗೆ ಪ್ರವ ಹಿಸಿತೆಂದು ಕೆಲವರ ಅಂಬೋಣವು ತೀರಾ ಸರಿ ಯಲ್ಲ !

15 ನೆ ಶಕದಲ್ಲಿದ್ದನೆಂಬ ಸಿದ್ಧೇಂದ್ರನು ತೆಲು ಗಿನಿಂದ ಉಡುಪಿಗೆ ಬಂದನು; ಇಲ್ಲಿಯ ಹರಿದಾಸರ ಕೃತಿಗಳು ಹಾಗೂ ಯಕ್ಷಗಾನ ಕೃತಿಗಳು ಅವನ ಅಭ್ಯಾಸಕ್ಕೆ ಸೇರಿದವು, ಆತ ತೆಲುಗಿನಲ್ಲಿರುವ ಕೂಚಿಪೂಡಿ ನೃತ್ಯದಲ್ಲಿ ತೊಡಗಿದಂತೆ ಹೇಳು ತ್ತಾರೆ. ಗಟ್ಟದ ಮೇಲೆ ( ಬಳ್ಳಾರಿ ಮತ್ತು ಮೈಸೂರು ಸೀಮೆಗಳಲ್ಲಿ ) 'ತಾಳಮದ್ದಳೆ'ಗೆ, ಬೊಂಬೆಯ ಆಟಕ್ಕೆ ದತ್ತಿಗಳು 16 ನೆ ಶತಕದವು. ಅದಕ್ಕಿಂತ ಮುಂಚೆ ಪಡುಕರಾವಳಿಯಲ್ಲಿ ಹಲ ವಾರು ಕೃತಿಗಳು ರಚಿತಗಳಾಗಿವೆಯೆಂದು ನಿಗಾ ತಿಳಿಯುತ್ತದೆ ! ಇಲ್ಲಿಯ ಹಲವು ಹರಿದಾಸರ ಕೃತಿಗಳು ಈ ಯಕ್ಷಗಾನ ಕೃತಿಗಳಿಗೆ ಪೂರಕವಾಗಿ ವೆಯೆಂದು ಸ್ಪಷ್ಟವಾಗಿದೆ.

ಈ ಶತಕದಲ್ಲಿ ತೆಂಕುತಿಟ್ಟಿನ ಸುಧಾರಕರಾದ ಬಲಿಪನಾರಾಯಣ ಭಾಗವತರು ಹಲವಾರು ಪ್ರಸಂಗಳನ್ನು ಬರೆದರು (ಅಹಲ್ಯಾಶಾಪಮೋಕ್ಷ.) ಅವರಂತೆ, ಅಗರಿ ಶ್ರೀನಿವಾಸಭಾಗವತರು (ಸುರತ್ಕಲ್ಲಿನ ಇಡ್ಯಗ್ರಾಮದಲ್ಲಿ ಜನಿಸಿದ್ದು, ಈಗ ಗುರುಪುರದ ಶಬರಿಕೆರೆಯಲ್ಲಿ ವಾಸವಾಗಿದ್ದಾರೆ) ಬರೆದ ವೇಂಕಟೇಶ ಮಹಾತ್ಮೆಯ ವಿಚಾರ ವಿಲ್ಲಿದೆ. (ಇದು 1963 ರಲ್ಲಿ ಇವರ ಸನ್ಮಾನ ಸಭೆ ಯಲ್ಲಿ ಪ್ರಕಟಿತ) ಆಮೊದಲು (1956 ರಲ್ಲಿ) ಭರ ತೇಶ ವೈಭವವನ್ನು ಬರೆದರು, ಅನಂತರ 1969 ರಲ್ಲಿ ಲಲಿತಾ ಉಪಾಖ್ಯಾನ, ಸಿರಿಮಹಾತ್ಮೆಗ ಳನ್ನು ಮುದ್ರಿಸಿದ್ದರು. ಇನ್ನು ಹತ್ತಾರು ಪ್ರಸಂಗ ಗಳು ಬರೆದಿದ್ದರೂ ಅಚ್ಚಾಗಿಲ್ಲ.

ಈ ಕೃತಿ 24 ಪುಟದ ಪುಟ್ಟಕೃತಿ, ಪುರಾಣ ಕತೆಯ ಎಲ್ಲಾ ಅಂಶಗಳೂ ಒಳಗೊಂಡಿದೆ; ಅಲ್ಲಲ್ಲಿ ಸುಂದರವಾದ ವರ್ಣನೆಗಳಿವೆ ಅಭಿನಯಯೋಗ್ಯ ವಾದ ನುಡಿತಗಳ ಹರವಿದೆ.

ತೊರೆದೆನ್ನಂ ಕರವೀರಕ್ಕೆದಿಹಳು
  ಲಕ್ಷ್ಮೀದೇವಿ ವೈಕುಂಠಮಂ
ದಿರಮನ್ನೇತಕೆ ವೇಂಕಟಾಚಲದಿ ನಾಂ
  ಸದ್ಭಕ್ತರಿಷ್ಟಾರ್ಥಮಂ ॥
ನಿರತಂ ಪಾಲಿಸೆನೆಂದು ಬಂದು ಮುದದಿಂ
  ಪದ್ಮಾವತೀದೇವಿಯಂ ।
ಕರೆಸಿದಾ ಹರಿ ಶ್ರೀನಿವಾಸ ದಯದಿಂ
  ನೀಂ ಪಾಲಿಸೆಮ್ಮಂ ಸದಾ ॥

ಕರವೀರವೆಂಬುದು ಕೊಲ್ಲಾಪುರವೆಂದು ಈಗ ಹೆಸರುಗೊಂಡಿದೆ, ಲಕ್ಷ್ಮೀದೇವಿಯ ಆವಾಸವಾಗಿದೆ. ವೇಂಕಟಾಚಲದ ಪೂರ್ವವಿಚಾರವೂ ಇಲ್ಲಿದೆ. ಕೃತ, ತ್ರೇತ, ದ್ವಾಪರಗಳಲ್ಲಿ ವೃಷಭಾಚಲ, ಅಂಜನಾಚಲ, ಉರಗಾಚಲ (ಶೇಷಾಚಲ) ವೆಂದ ಹೆಸರುಗೊಂಡದ್ದು ಕಲಿಯುಗದಲ್ಲಿ ವೇಂಕ ಟಾಚಲವೆಂದು ಪ್ರಖ್ಯಾತವಾಯಿತು– ಎಂದು ಈ ಕತೆಯನ್ನು ಜನಕ ರಾಯನಿಗೆ ಶತಾನಂದನೆಂದಂತೆ ಈ ಕೃತಿ ಪ್ರಾರಂಭವಾಗಿದೆ. ಇಲ್ಲಿ ಒಂದೊಂದು ನುಡಿಯಲ್ಲಿ ಸೂಚಿಸಿದ ಪೂರ್ವಕತೆಯು ಸಂದ ರ್ಭೋಚಿತವಾಗಿ ಜನರಿಗೆ ಚಿತ್ತರಿಸಲೆಡೆಯಿದೆ. ವೇಂಕಟಾಚಲಮಹಾತ್ಮೆ ಹಲವು ಪುರಾಣಗ ಳಲ್ಲಿದೆ. ಕನ್ನಡದಲ್ಲಿ ಹಲವರು ಖಂಡಕಾವ್ಯಗ ಳಾಗಿ ಬರೆದಂತೆ ಯಕ್ಷಗಾನ ಕೃತಿಯಾಗಿಯೂ ಬರೆಯಲಾಗಿದೆ. ಜನರಲ್ಲಿ ಸದಾ ದೈವಭಕ್ತಿಯು ದಿನಲು ದೇವನ ಅವತಾರಗಳ ಲೀಲಾಕಥನವು ಅತ್ಯವಶ್ಯವದೆ. 'ಶ್ರವಣಂ ಕೀರ್ತನಂ ವೀಕ್ಷಣಂ

**ಶ್ರೀ ಕೆ. ವೆಂಕಟರಾಯಾಚಾರ್ಯ**

# ತಿರುಮಲೆ
## ಶ್ರೀ ವೆಂಕಟೇಶ್ವರಸ್ವಾಮಿ ಅರ್ಚನಾ ಯೋಜನೆ

ಭಕ್ತರು ತಮ್ಮ ಇಷ್ಟದೈವವಾದ ಶ್ರೀ ವೆಂಕಟೇಶ್ವರಸ್ವಾಮಿಯನ್ನು ಅರ್ಚಿಸಲು ಅನುಕೂಲವಾಗುವಂತೆ ತಿರುಮಲೆ ತಿರುಪತಿ ದೇವಸ್ಥಾನದವರು ಹೊಸದಾಗಿ ಬಾಲಾಜೀ ಅರ್ಚನಾ ಯೋಜನೆಯನ್ನು ಆರಂಭಿಸಿದ್ದಾರೆ.

### ಈ ಯೋಜನೆಯಲ್ಲಿ ಸದಸ್ಯರಾಗುವುದು ಹೇಗೆ?

ನೀವು ಮಾಡಬೇಕಾಗಿರುವುದೆಂದರೆ ಇಂಡಿಯನ್ ಓವರ್‌ಸೀಸ್ ಬ್ಯಾಂಕ್ ಮೂಲಕ ತಿ. ತಿ. ದೇ. ಗಳಿಗೆ ರೂ 5586-00 ಸಲ್ಲಿಸುವುದು. ಇದರ ಪ್ರತಿಫಲವಾಗಿ ಹತ್ತು ವರ್ಷಗಳ ಕಾಲ ವರ್ಷಕ್ಕೊಮ್ಮೆ ನೀವು ಬಯಸಿದ ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಅರ್ಚನೆ ಮಾಡುವ ಮಹದ್ಭಾಗ್ಯ ನಿಮ್ಮದಾಗುತ್ತದೆ.

ನೀವು ಸಲ್ಲಿಸಿದ ಹಣ ಹತ್ತು ವರ್ಷಗಳಲ್ಲಿ 15000 ರೂಗಳಾಗಿ ಶ್ರೀ ವೆಂಕಟೇಶ್ವರಸ್ವಾಮಿಗೆ ಸೇರುವುದು. ಹಾಗಾಗಿ ಶ್ರೀ ವೆಂಕಟೇಶ್ವರ ಸ್ವಾಮಿಗೆ ಈ ಮೊತ್ತವನ್ನು ಅರ್ಪಿಸಿದ ತೃಪ್ತಿಯೂ ನಿಮಗೆ ದೊರೆಯುತ್ತದೆ.

### ಸೌಲಭ್ಯಗಳು :

ಅರ್ಚನೆಯ ದಿನದಂದು ದಾನಿಗಳಿಗೆ ತಿರುಮಲೆಯಲ್ಲಿ ವಸತಿ ಸೌಕರ್ಯ ಕಲ್ಪಿಸಲಾಗುತ್ತದೆ. ದಂಪತಿಗಳು ಅರ್ಚನ ಸೇವೆಯಲ್ಲಿ ಪಾಲುಗೊಳ್ಳಬಹುದು. ಕುಟುಂಬದ ಮೂವರಿಗೆ ಸುಪ್ರಭಾತದರ್ಶನ, ಪ್ರತ್ಯೇಕ ದರ್ಶನವುಂಟು. ಜೊತೆಗೇ ಉತ್ತರೀಯ ಅಥವಾ ಕುಪ್ಪುಸದ ಕಣ, ಪ್ರಸಾದಗಳುಂಟು.

**ಕಾರ್ಯನಿರ್ವಹಣಾಧಿಕಾರಿ**

ತಿ. ತಿ. ದೇ.

ಸ್ಮರಣಂ ಪಾದಸೇವನಂ ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಂ, ಎಂಬಂತೆ, ಭಾವುಕರು ತಮ್ಮ ಸ್ವಭಾವಕ್ಕೆ ತಕ್ಕಂತೆ ಉಪಾಸನೆ ಮಾಡಲು, ತನ್ಮೂಲಕ 'ಪ್ರೇಯಃ ಶ್ರೇಯಃ'ಗಳನ್ನು (ಇಹ-ಪರಸುಖಗಳನ್ನು) ಪಡೆಯಲು ಇಂತಹ ಕೃತಿಗಳು ಪ್ರೇರಕಗಳಾಗುತ್ತವೆಯೆಂದರೆ ಅತ್ಯುಕ್ತಿಯಲ್ಲ !

ಕಾಲಹಸ್ತಿಯಲ್ಲಿದ್ದ ಪುರಂದರನೆಂಬುವವನ ಮಗ ಮಾಧವನು ಸಜ್ಜನನಾಗಿದ್ದನು; ಕಾಲಗತಿ ದುರಾಚಾರಿಯಾದನು. ನಡುಹಗಲಿಗೆ ಸತೀಸಂಗ ಮಕ್ಕೆಳಸಿದನು. ಆಕೆ ಏನೆಂದರೂ ಕೇಳದಾಗ, "ಜಲಾಶಯ"ದಲ್ಲಿಗೆ ತಾನುಬರುವೆನೆಂದು (ಮನೆಯಲ್ಲಿ ಇಂತಹ ಅಸಂಗತ ತರವಲ್ಲೆಂದು) ಹೇಳಿದಳು. ಅಲ್ಲಿಗೈದಿದ ಮಾಧವ ಅಲ್ಲಿದ್ದ 'ಕುಂತಳೆ'ಯೆಂಬ ಹೊಲತಿಯಲ್ಲಿ ಅನುರಕ್ತನಾದನು. ಆಕೆ ನಿಜಾಂಶವನ್ನು ಹೇಳಿ, ಸಲ್ಲದೆಂದರೂ, ಕಾಮಾಂಧನಾದನು. ಆಗ ಆಕೆಯೆಂದುದು.

ನುಡಿಯ ನೀತಿಯ ಕೇಳದೊಡಗೂಡಿದೆಯ ಎನ್ನ  
ಕಡಿದಿನ್ನು ಜನಿವಾರ ಕುಡಿ ಸುರೆಯನಿದ  
ಕೋ ನಾ ।  
ಕೊಡುವ ಮಾಂಸವ ತಿನ್ನುತೊಡನೆ ಬೋಳಿಸು  
ತಲೆಯ ತಡವೇಕೆ ನಿನಗೆ ನಾನು ॥  
ಮಡದಿಯಾದೆನು ಎನ್ನ ಬಿಡದೆ ನೀ ಬಂದೆನ್ನ ।  
ಗುಡಿಸಲಿನೊಳಹುದೆಂದು ನುಡಿಯಲದ  
ಕವನೊಡಂ ।  
ಬಡುತಾಕೆ ಸಹ ಬಂದು ಪಡೆದು ಹೊಲೆತನ  
ವಸತಿ ಸಡಗರದೊಳಿರುತಿರ್ದನು ॥

'ಕಾಮಾಂಧಾ ಹಿ ಪ್ರಕೃತಿ ಕೃಪಣಾಃ' ಎಂದಂತೆ ಕಾಮಕ್ಕೆ ಕಣ್ಣಿಲ್ಲವೆಂದಂತೆ ಮಾಧವನು ಕಾಮ ಪರವಶನಾಗಿದ್ದನು (ಅಯೆಡೆಗೆ ಬಂದ ಸ್ವಭಾರ್ಯೆಯನ್ನು ಮರಳಿಸಿ, ಈಕೆಯನ್ನು ಸೇರಿದನೆಂದರೆ ಪೂರ್ವಜನ್ಮದ ಕರ್ಮಫಲವೆಂದೇ ಹೇಳಬೇಕು )

ಹನ್ನೆರಡು ವರ್ಷದ ಮೇಲೊಮ್ಮೆ ಕುಂತಳೆ ರೋಗದಿಂದ ಮಡಿದಳು. ಆಗ ಪೂರ್ವ ಸುಕೃತದಿಂದ ಆತನಿಗೆ ವಿವೇಕೋದಯವಾಯಿತು: ಯಾತ್ರಿಕರು ಶೇಷಾಚಲಕ್ಕೆ ಸಾಗುವುದನ್ನು ಕಂಡು, ತಾನೂ ಸದಾಕರುಣ ಕಾಂಕ್ಷಿಯಾಗಿ 'ವೇಂ ಪಾಪಂ ಕಟತೇ ಯಸ್ಮಾತ್ ತಸ್ಮಾತ್ ವೇಂಕಟನಾಮಕ' ಎಂಬಂತೆ ( ದುರಿತಗಳ ನೀಗಿರಿಯೊಳಗೆ ನೀಗಿರುವ ಕಾರಣದಿಂದ ವೇಂಕಟಗಿರಿಯೆನುತಲೀ ಶೈಲ ಹರಡಿಸಲಿನ್ನು ಕಲಿಯುಗದಿ" ಎಂದು ಕನ್ನಡದಲ್ಲಿದೆ) ಅಲ್ಲಿಗೆ ಸಾಗುವನು. ಮಾಧವ ತಿರುಮಲೈನಲ್ಲಿ ಪಾಂಡವರ ಕುಲದ ಸುಧನ್ವನಮಗ ಆಕಾಶರಾಯನಾಗಿ ಜನಿಸಿದನು. ಅತನಿಂದ ಲಕ್ಷ್ಮಿಯೇ ಪದ್ಮಾವತಿಯಾಗಿ ಜನಿಸಿದಳು. ಆಕೆಯೂ ಶ್ರೀನಿವಾಸನನ್ನು ವರಿಸುವಳೆಂಬ ಕತೆಗೆ ಇದು ಪೀಠಿಕೆಯಾಗಿದೆ. ★

## ಕಿಶೋರ ಜಗತ್

# ಮಹರ್ಷಿ ಆಸ್ತೀಕ

ನಮ್ಮ ಭಾರತದ ಮನೆ ಮನೆಗಳಲ್ಲಿ ಸರ್ಪಗಳನ್ನು ಕಂಡೊಡನೆಯೇ 'ಆಸ್ತೀಕ', 'ಆಸ್ತೀಕ' ಎಂಬುದಾಗಿ ನೆನೆಯುವುದುಂಟು. ಹಾಗೂ ಮನೆಯಲ್ಲಿ ಎಲ್ಲ ಸ್ಥಳಗಳಲ್ಲಿ 'ಆಸ್ತೀಕ' ಎಂದು ಬರೆಯುವುದೂ ವಾಡಿಕೆಯಾಗಿದೆ. ಜರತ್ಕಾರು ಎಂಬ ಋಷಿಯ ಮಗನಾಗಿ ಜನಿಸಿ ಸರ್ಪಗಳಿಗೆ ಸಹಾಯ ಮಾಡಿ, ಆಪತ್ತಿನಿಂದ ಪಾರುಮಾಡಿ, ಅವುಗಳಿಂದ ಅಭಯ ಪಡೆದು ಮಾನವ ಕುಲಕ್ಕೆ ಪರಮೋಪಕಾರ ಮಾಡಿದ ಮಹಾನ್ ವ್ಯಕ್ತಿ 'ಆಸ್ತೀಕ'. ಅವನು ಮಾಡಿದ ಮಹತ್ಕಾರ್ಯವು ಪರಮ ಶ್ಲಾಘನೀಯವಾದುದು.

ಕುರು ವಂಶದ ಅರಸು ಪರೀಕ್ಷಿತರಾಜನು ಧರ್ಮಾರ್ಥಗಳಲ್ಲಿ ಕುಶಲನಾಗಿದ್ದನಲ್ಲದೇ ನೀತಿಶಾಸ್ತ್ರವಿಶಾರದನೂ, ಮಹಾಬುದ್ಧಿಶಾಲಿಯೂ ಆಗಿದ್ದನು. ಇವನು ಧರ್ಮದಿಂದ ರಾಜ್ಯ ಪರಿಪಾಲನೆ ಮಾಡುತ್ತಿದ್ದನು. ಒಂದು ದಿನ ಬೇಟೆಯಾಡಲು ಬಹು ಆಸಕ್ತನಾಗಿ ರಾಜಕಾರ್ಯಗಳನ್ನು ಮಂತ್ರಿಗಳಿಗೊಪ್ಪಿಸಿ ಕಾಡಿಗೆ ತೆರಳಿದನು. ಅಲ್ಲಿ ಜಿಂಕೆಯೊಂದಕ್ಕೆ ಬಾಣದಿಂದ ಗುರಿ ಇಟ್ಟು ಹೊಡೆದನು. ಆ ಘಾತದಿಂದ ಆ ಜಿಂಕೆಯು ನೆಟ್ಟ ಬಾಣದೊಂದಿಗೆ ಓಡಿಹೋಯಿತು. ರಾಜನು ಬೆನ್ನಟ್ಟಿಹೋದನು. ಕೊನೆಗೆ ಜಿಂಕೆಯು ಗೋಚರವಾಗದಿರಲು, ಹಸಿವು, ಬಾಯಾರಿಕೆಗಳಿಂದ ಕೂಡಿದವನಾಗಿ ರಾಜನು ಶಮೀಕ ಋಷಿಗಳ ಆಶ್ರಮಕ್ಕೆ ಬಂದು ಮುಟ್ಟಿದನು. ಆದರೆ ಋಷಿಗಳು ಮೌನವ್ರತದಲ್ಲಿದ್ದ ಕಾರಣ ಅವರು ಉತ್ತರ ಕೊಡದೇ ಇರಲು ಅಲ್ಲಿಯೇ ಸತ್ತುಬಿದ್ದಿದ್ದ ಸರ್ಪವೊಂದನ್ನು ಧನುಸ್ಸಿನ ತುದಿಯಿಂದ ಎತ್ತಿ ಋಷಿಯ ಕೊರಳಿಗೆ ಹಾಕಿಬಿಟ್ಟನು. ನಂತರ ಋಷಿಯಮಗನಾದ ಶೃಂಗಿಯು ಇದನ್ನು ತಿಳಿದು "ಯಾವ ತಪ್ಪನ್ನೂ ಮಾಡದ ನನ್ನ ತಂದೆಯ ಕೊರಳಲ್ಲಿ ಯಾವನು ಸತ್ತ ಸರ್ಪವನ್ನು ಮಾಲೆಯಂತೆ ಹಾಕಿದನೋ ಅವನನ್ನು ಕ್ರುದ್ಧನಾದ ತಕ್ಷಕನು ಏಳುದಿನಗಳೊಳಗಾಗಿ ಕಚ್ಚಿ ಕೊಲ್ಲಲಿ" ಎಂಬುದಾಗಿ ಶಾಪಕೊಟ್ಟನು.

ಆದರಂತೆ ತಕ್ಷಕನಿಂದ ಪರೀಕ್ಷಿತರಾಜನು ಮರಣಹೊಂದಿದನು. ತರುವಾಯ ಪರೀಕ್ಷಿತ ರಾಜನ ಮಗನಾದ ಜನಮೇಜಯರಾಜನು ತನ್ನ ತಂದೆಯ ಪ್ರಾಣವನ್ನು ಅಪಹರಿಸಿದ ತಕ್ಷಕನ ಮೇಲೆ ಸೇಡು ತೀರಿಸಿಕೊಳ್ಳಲು ಪ್ರತಿಜ್ಞೆಗೈದನು. ಈ ಪ್ರತಿಜ್ಞೆಯನ್ನು ನೆರವೇರಿಸಲು ಸರ್ಪಯಾಗವನ್ನು ಮಾಡಲು ಸಂಕಲ್ಪಮಾಡಿದನು, ಪುರೋಹಿತರನ್ನು ಕರೆಸಿ ಶೀಘ್ರದಲ್ಲಿಯೇ ಯಜ್ಞವನ್ನು ಪ್ರಾರಂಭಿಸಿದನು.

ಋತ್ವಿಜರು ಮಂತ್ರಪೂರ್ವಕವಾಗಿ, ಜ್ವಲಿಸುತ್ತಿರುವ ಯಜ್ಞೇಶ್ವರನಲ್ಲಿ ಹೋಮ ಮಾಡುತ್ತಿದ್ದರು. ಸರ್ಪಗಳ ಹೆಸರನ್ನು ಹೇಳಿ ಅಗ್ನಿಯ ಬಳಿಗೆ ಆಹ್ವಾನಿಸಿ "ಸ್ವಾಹಾ" ಎಂಬ ಶಬ್ದವನ್ನು ಉಚ್ಚರಿಸಿದೊಡನೆಯೇ ಸರ್ಪಗಳು ಪ್ರದೀಪ್ತವಾಗಿದ್ದ ಅಗ್ನಿಯಲ್ಲಿ ಬೀಳುತ್ತಿದ್ದವು. ಕೆಲವು ಹಾವುಗಳು ಬುಸುಗುಟುತ್ತಿದ್ದವು, ಮತ್ತೆ ಕೆಲವು ದೀರ್ಘವಾಗಿ ನಿಟ್ಟುಸಿರುಬಿಡುತ್ತಿದ್ದವು. ಅಗ್ನಿಯಲ್ಲಿ ಬೀಳುವ ಭಯದಿಂದ ಪರಸ್ಪರವಾಗಿ ತೆಕ್ಕೆಹಾಕಿಕೊಳ್ಳುತ್ತಿದ್ದವು. ಆದರೆ ಮಂತ್ರದಿಂದ ಆಕರ್ಷಿತವಾದ ಸರ್ಪಗಳು ಯಜ್ಞೇಶ್ವರನಿಂದ ತಪ್ಪಿಸಿಕೊಳ್ಳುವ ಸಾಧ್ಯತೆ ಮಾತ್ರ ಇರಲಿಲ್ಲ.

ಬಿಳಿಯ ಸರ್ಪಗಳು, ಕಾಳಿಂಗ ಸರ್ಪಗಳು, ನೀಲಸರ್ಪಗಳು, ವೃದ್ಧ ನಾಗಗಳು, ಚಿಕ್ಕ ನಾಗಗಳು, ಎಲ್ಲವೂ ಘೋರವಾಗಿ ಶಬ್ದಮಾಡುತ್ತ ಯಜ್ಞೇಶ್ವರನಲ್ಲಿ ಬಂದು ಬೀಳುತ್ತಿದ್ದವು. ಭಯಂಕರ ವಿಷಪೂರಿತ ಸರ್ಪಗಳು, ಆನೆಯ ಸೊಂಡಿಲಿನ ಆಕಾರವುಳ್ಳ ಸರ್ಪಗಳೂ, ಅಗ್ನಿಕುಂಡದಲ್ಲಿ ತಂಡೋಪತಂಡವಾಗಿ ಬಿದ್ದು ಯಜ್ಞೇಶ್ವರನಿಗೆ ಆಹುತಿಯಾದವು.

ಜನಮೇಜಯನು ಸರ್ಪಯಾಗದ ದೀಕ್ಷೆಯನ್ನು ಕೈಗೊಂಡಿರುವನೆಂಬ ವಾರ್ತೆಯನ್ನು ಕೇಳಿದೊಡನೆಯೇ ತಕ್ಷಕನು ಇಂದ್ರನ ಅರಮನೆಗೆ ಹೋದನು. ಅಲ್ಲಿ ಇಂದ್ರನಿಗೆ ಎಲ್ಲ ವಿಷಯ ತಿಳಿಸಿ ರಕ್ಷಣೆಗೆ ಮೊರೆಹೊಕ್ಕನು. ಇಂದ್ರನು "ಹೇ ನಾಗರಾಜ! ನನ್ನ ಅರಮನೆಯಲ್ಲಿದ್ದರೆ ನಿನಗೆ ಯಾವ ಬಾಧೆಯೂ ಆಗದು" ಎಂದು ಹೇಳಿ ಸಂತೈಸಿದನು. ತಕ್ಷಕನು ಅಲ್ಲಿ ಸುಖವಾಗಿ ಇದ್ದುಬಿಟ್ಟನು.

ಇತ್ತ ನಾಗರ ಒಡೆಯನಾದ ವಾಸುಕಿಗೆ ತನ್ನ ವಂಶೀಯರು ಕೋಟಿ ಸಂಖ್ಯೆಯಲ್ಲಿ ಜನಮೇಜಯನ ಸರ್ಪಯಾಗದಲ್ಲಿ ಅಸು ನೀಗುತ್ತಿರುವುದನ್ನು ಕಂಡು ಬಹಳ ದುಃಖವಾಯಿತು. ಇನ್ನು ಸ್ವಲ್ಪಕಾಲ ಯಾಗವು ನಡೆದರೆ ಪ್ರಪಂಚದಲ್ಲಿ ಸರ್ಪಗಳ ವಂಶವೇ ನಿರ್ನಾಮವಾಗಿ ಹೋಗುವುದೆಂಬ ಭಯದಿಂದ ಕಂಗೆಟ್ಟನು. ಮತ್ತು ವಾಸುಕಿಯ ತಂಗಿಯಾದ ಜರತ್ಕಾರುವಿನ ಬಳಿಗೆ ಹೋಗಿ ತನ್ನ ದುಃಖವನ್ನು ತೋಡಿಕೊಂಡು ಹೇಳಿದನು.

"ತಂಗೀ! ನಾನೀಗ ಜನಮೇಜಯನು ಮಾಡುತ್ತಿರುವ ಸರ್ಪಯಾಗದ ಅಗ್ನಿಕುಂಡದಲ್ಲಿ ಬಿದ್ದು ಪ್ರಾಣ ಬಿಡುವಂತೆ ಆಗಿದೆ. ಜ್ಞಾತಿ ಬಾಂಧವರ ಜೊತೆಯಲ್ಲಿ ನಾನೂ ಸಹ ಪ್ರೇತರಾಜನ ಅರಮನೆಗೆ ಹೋಗುವದು ಅನಿವಾರ್ಯವಾಗಿದೆ. ನೀನು ಮಾತ್ರ ಕರುಣೆ ದೋರಬೇಕು. ಈಗ ನಮ್ಮನ್ನು ರಕ್ಷಿಸಲು ನಿನ್ನ ಮಗನಾದ 'ಆಸ್ತೀಕ'ನ ಸಹಾಯವು ನಮಗೆ ಅವಶ್ಯವಾಗಿದೆ. ಆಸ್ತಿಕನೇ ಸರ್ಪಯಾಗವನ್ನು ಪ್ರತಿಷೇಧಿಸುತ್ತಾನೆಂದೂ, ಆತನಿಗೆ ಮಾತ್ರ ಈ ಸಾಮರ್ಥ್ಯವುಂಟೆಂದು ಕೇಳಿದ್ದೇನೆ- ಈ ಮಹಾಕಾರ್ಯವನ್ನೂ, ಮಹೋಪಕಾರವನ್ನು ವೇದಾಂಗ ಪಾರಂಗತನಾದ ಆಸ್ತೀಕನಿಗೆ ತಿಳಿಸಿ ಉದ್ಧರಿಸಬೇಕು" ಎಂದಾಗಿ ಅಂಗಲಾಚಿ ಬೇಡಿಕೊಂಡನು.

ಅಣ್ಣನ ಮಾತಿನಂತೆ ಜರತ್ಕಾರುವು ತನ್ನ ಮಗನಿಗೆ ಈ ಕಾರ್ಯವನ್ನು ತಿಳಿಸಿ ನಾಗಕುಲವನ್ನೇ ಉಳಿಸಲು ಕೇಳಿಕೊಂಡಳು.

ಶ್ರೀ ಶ್ರೀನಿವಾಸ ಮಠದ, ಬಿ.ಎಸ್‌ಸಿ.

ಮಾತೃಆಜ್ಞಾಪರಿಪಾಲಕನಾದ ಆಸ್ತೀಕನು "ಹಾಗೆಯೇ ಆಗಲಿ! ಅಮ್ಮಾ. ಅವರನ್ನು ಈ ಘೋರವಾದ ಆಪತ್ತಿನಿಂದ ವಿಮೋಚನೆ ಮಾಡುವೆ" ಎಂದು ಸಮ್ಮತಿಸಿದನು.

ಆಸ್ತೀಕನು ನಾಗರಾಜನಾದ ವಾಸುಕಿಯನ್ನು ಸ್ವಾಂತನಗೊಳಿಸಿ ಅವನ ಮನದಲ್ಲಿದ್ದ ಚಿಂತೆಯನ್ನು ದೂರಮಾಡಿ ಯಜ್ಞಮಂಟಪಕ್ಕೆ ಹೊರಟು ಬಂದನು. ಅಲ್ಲಿ ಒಳಗೆ ಹೋಗಲು ದ್ವಾರಪಾಲಕರು ಸಮ್ಮತಿ ಕೊಡಲಿಲ್ಲ. ಆಗ ಬ್ರಾಹ್ಮಣ ಶ್ರೇಷ್ಠನಾದ, ಪುಣ್ಯಾತ್ಮರಲ್ಲಿ ವರಿಷ್ಠನಾದ ಆಸ್ತೀಕನು ಯಜ್ಞವನ್ನು ಮಾತ್ರವೇ ಅಲ್ಲ, ಅನಂತ ಕೀರ್ತಿಮಂತನಾದ ಜನಮೇಜಯ ರಾಜ, ಋತ್ವಿಜರು, ಸದಸ್ಯರು ಮತ್ತು ಅಗ್ನಿ ಎಲ್ಲರನ್ನೂ ಉಚ್ಚಧ್ವನಿಯಿಂದ ಸ್ತೋತ್ರ ಮಾಡಲು ಆರಂಭಿಸಿದನು.

ಸ್ತೋತ್ರದಿಂದ ಸಂತುಷ್ಟನಾದ ರಾಜನು ಅವನಿಗೆ ಮರ್ಯಾದೆ ಮಾಡಿ ಒಳಗೆ ಕರೆದುಕೊಂಡು ಬಂದು ಅವನಿಗೆ ಕೇಳಿದ ವರ ಕೊಡುವೆನೆಂದು ಹೇಳಿದನು. ಅಷ್ಟರಲ್ಲಿ ಋತ್ವಿಜರು "ರಾಜನೇ ಯಜ್ಞೇಶ್ವರನಲ್ಲಿ ಆಹುತಿಯಾಗಲು ತಕ್ಷಕನಿನ್ನೂ ಬರಲಿಲ್ಲ" ಎಂದು ತಿಳಿಸಿದರು. ತಕ್ಷಕನನ್ನು ಕೂಡಲೇ ಮಂತ್ರದಿಂದ ಆಕರ್ಷಿಸಬೇಕೆಂದು ರಾಜನು ಹೋತೃವಿಗೆ ತಿಳಿಸಿದನು. ಋತ್ವಿಜರು "ಆ ತಕ್ಷಕನು ಇಂದ್ರನ ಅರಮನೆಯಲ್ಲಿ ಸುಖದಿಂದ ಇರುವನಾದ್ದರಿಂದ ಅಷ್ಟು ಸುಲಭವಾಗಿ ಬರಲು ಸಾಧ್ಯವಿಲ್ಲ" ಎಂದರು. ರಾಜನು ಆತುರತೆಯಿಂದ ಕೂಡಿದವನಾಗಿ ಇಂದ್ರನ ಸಹಿತವಾಗಿ ಆ ತಕ್ಷಕನು ಅಗ್ನಿಯಲ್ಲಿ ಬೀಳುವಂತೆ ಮಾಡಲು ಒತ್ತಾಯಿಸಿದನು. ಹೋತೃವು ಕೂಡಲೇ "ಸಹೇಂದ್ರಂ ತಕ್ಷಕಂ ಜುಹೋಮಿ ಸ್ವಾಹಾ" ಎಂದು ಅಗ್ನಿಯಲ್ಲಿ ಆಜ್ಯವನ್ನು ಹೋಮ ಮಾಡಿದನು. ಆ ಮಹಾಮಂತ್ರವು ಇಂದ್ರ ಸಹಿತನಾದ ತಕ್ಷಕನನ್ನು ವೇದಿಕೆಯ ಮೇಲಕ್ಕೆ ದರದರನೆ ಸೆಳೆದುಕೊಂಡು ಬಂದಿತು. ಇಂದ್ರನು ತತ್ತರಿಸಿ ಭಯದಿಂದ ತಕ್ಷಕನನ್ನು ಕೆಳಗೆ ಕೆಡವಿ ಸ್ವರ್ಗಕ್ಕೆ ನಡೆದುಬಿಟ್ಟನು.

ಮಂತ್ರಶಕ್ತಿಯಿಂದ ಆಕರ್ಷಿತನಾದ ತಕ್ಷಕನು ಅಗ್ನಿಯ ಕಡೆಗೆ ಬರತೊಡಗಿದನು. ಆಗ ರಾಜನು ಬ್ರಾಹ್ಮಣನಾದ ಆಸ್ತೀಕನಿಗೆ ವರದಾನ ಕೊಡುತ್ತೇನೆಂದು ಹೇಳಿದಂತೆ–ಬೇಕಾದುದನ್ನು ಬೇಡಬಹುದೆಂದು ತಿಳಿಸಿದನು. ಕೂಡಲೇ ಆಸ್ತೀಕನು — "ರಾಜನೇ ನಿನ್ನಯಾಗವು ವಿರಾಮ ಹೊಂದಲಿ, ಈ ಕ್ಷಣದಿಂದಲೇ ಯಜ್ಞಕುಂಡಕ್ಕೆ ಸರ್ಪಗಳು ಬೀಳುವುದು ಬೇಡ' ಎಂದಾಗಿ ಕೇಳಿಕೊಂಡನು. ರಾಜನು ಗತ್ಯಂತರವಿಲ್ಲದೇ 'ಆಗಲಿ', ಎಂದನು. ಇನ್ನೆರಡು ಕ್ಷಣಗಳಲ್ಲಿ ತಕ್ಷಕನು ಅಗ್ನಿಗೆ ಬಿದ್ದು ಭಸ್ಮವಾಗುವಷ್ಟರಲ್ಲಿಯೇ, ಆಸ್ತೀಕನು ಅಗ್ನಿಕುಂಡದಲ್ಲಿ ಬೀಳುತ್ತಿದ್ದ ತಕ್ಷಕನನ್ನು ಕುರಿತು ಮೂರು ಬಾರಿ ತಿಷ್ಠ, ತಿಷ್ಠ, ತಿಷ್ಠ–ನಿಲ್ಲು–ನಿಲ್ಲು, ನಿಲ್ಲೆಂದು ಹೇಳಿದನು.

ಆಸ್ತೀಕನು ಹೀಗೆಂದು ಹೇಳಿದೊಡನೆಯೇ ಭಯಪೀಡಿತನಾಗಿದ್ದ ತಕ್ಷಕನು, "ಮನುಷ್ಯನೊಬ್ಬನು ಆಕಾಶಕ್ಕೂ ಭೂಮಿಗೂ ಮಧ್ಯದಲ್ಲಿ ಯೋಗಶಕ್ತಿಯಿಂದ ನಿಲ್ಲುವಂತೆ" ನಿಂತುಬಿಟ್ಟನು. ರಾಜನು ಆಸ್ತೀಕನ ಪರಮ ಅದ್ಭುತವಾದ ಶಕ್ತಿಯನ್ನು ಕಂಡುಕೊಂಡನು. ಸರ್ವರೂ "ಯಾಗವು ಪರಿಸಮಾಪ್ತಿಯಾಗಲಿ, ಅಳಿದುಳಿದಿರುವ ಸರ್ಪಗಳು ಕುಶಲದಿಂದಿರಲಿ. ಆಸ್ತೀಕನು ಸುಪ್ರೀತನಾಗಲಿ" ಎಂದು ಘೋಷಿಸಿದರು.

ಅನಂತರದಲ್ಲಿ ರಾಜನು ಕೃತಕೃತ್ಯನಾದ ಮನೀಷಿಯಾದ ಆಸ್ತೀಕನನ್ನು ಯಥೋಚಿತವಾಗಿ ಸತ್ಕರಿಸಿ ಸರ್ಪಲೋಕಕ್ಕೆ ಬೀಳ್ಕೊಟ್ಟನು.

ಆಸ್ತೀಕನು ಸಂತೋಷಭರಿತನಾಗಿ ಬಂದ ಕಾರ್ಯವನ್ನು ಯಶಸ್ವಿಯಾಗಿ ಪೂರ್ತಿಗೊಳಿಸಿ ತನ್ನ ಮಾವನಾದ ವಾಸುಕಿಯ ಬಳಿಗೆ ಬಂದನು. ಮಾವನಿಗೂ ತಾಯಿಗೂ ನಮಸ್ಕರಿಸಿ ನಡೆದ ವೃತ್ತಾಂತವನ್ನು ವಿಶದವಾಗಿ ವಿವರಿಸಿದನು. ಜರತ್ಕಾರುವಿಗೂ, ಎಲ್ಲ ಸರ್ಪಗಳಿಗೂ ವಾಸುಕಿಗೂ ಬಹು ಸಂತೋಷವಾಯಿತು.

ಅವರೆಲ್ಲರೂ "ಆಸ್ತೀಕನೇ! ನಮ್ಮನ್ನು ಬ್ರಹ್ಮದಂಡಕ್ಕೆ ಸಮಾನವಾದ ಆಪತ್ತಿನಿಂದ ವಿಮೋಚನೆಗೊಳಿಸಿರುವೆ, ಕಾರಣ–ನಿನಗೇನು ವರಬೇಕು ಕೇಳಿಕೋ" ಎಂದರು. ಆಸ್ತೀಕನಿಗೆ ಯಾವ ವರದ ಅವಶ್ಯಕತೆಯೂ ಇರಲಿಲ್ಲ. ಆದರೂ ಲೋಕಕಲ್ಯಾಣ ಸಾಧಿಸಲು "ಲೋಕದಲ್ಲಿ ಬ್ರಾಹ್ಮಣರೇ ಆಗಲಿ, ಇತರ ಮಾನವರೇ ಆಗಲಿ, ಈ ನನ್ನ ಧರ್ಮಾಖ್ಯಾನವನ್ನು ಪ್ರಾತಃಕಾಲ, ಸಾಯಂಕಾಲಗಳಲ್ಲಿ ಏಕಚಿತ್ತರಾಗಿ ಯಾರು ಪಠಿಸುತ್ತಾರೆಯೋ ಅವರಿಗೆ ನಿಮ್ಮಿಂದ ಯಾವ ಭಯವೂ ಇರಕೂಡದು, ನಿಮ್ಮಿಂದ ಯಾವ ಬಾಧೆಯೂ ಆಗಕೂಡದು" ಎಂದು ಕೇಳಿಕೊಂಡನು. ಸರ್ಪಗಳೆಲ್ಲವೂ ಈ ಮಾತನ್ನು ನಡೆಸಿಕೊಡುವುದಾಗಿ ಅಭಯಕೊಟ್ಟವು. ಆದ್ದರಿಂದ ಸರ್ಪಗಳು ಕಣ್ಣಿಗೆ ಬಿದ್ದೊಡನೆಯೇ ಸರ್ವರೂ ಅವನ್ನು ಕುರಿತು ಹೀಗೆ ಹೇಳಬೇಕು.

ಸರ್ಪಾಪಸರ್ಪ ಭದ್ರಂತೇ ಗಚ್ಛ
ಸರ್ಪ ಮಹಾವಿಷ ।
ಜನಮೇಜಯ ಯಜ್ಞಾಂತೇ ಆಸ್ತಿಕ-
ವಚನಂ ಸ್ಮರ ॥

ಈ ಕಾರಣದಿಂದ ನಮ್ಮ ಭಾರತ ದೇಶದಲ್ಲಿ ಹಾವುಗಳನ್ನು ಕಂಡಾಗ 'ಆಸ್ತೀಕ' ಎಂದು ಹೇಳುವ ವಾಡಿಕೆ ಬಂದಿತು.

ಜರತ್ಕಾರುವಿನಿಂದ ಜರತ್ಕಾರುವಿನಲ್ಲಿ ಸಮುತ್ಪನ್ನನಾದ ಮಹಾಯಶನಾದ, ಸತ್ಯಸಂಧನಾದ ಆಸ್ತೀಕನು ಸರ್ಪಗಳಿಂದ ನಮ್ಮನ್ನು ರಕ್ಷಿಸಲಿ.

ಜರತ್ಕಾರೋರ್ಜರತ್ಕಾರ್ವಾಂ ಸಮು-
ತ್ಪನ್ನೋ ಮಹಾಯಶಾಃ ।
ಆಸ್ತೀಕಃ ಸತ್ಯಸಂಧೋ ಮಾಂ,
ಪನ್ನಗೇಭ್ಯೋಽಭಿರಕ್ಷತು ॥



# ದಿವ್ಯ ಪ್ರಬಂಧಗಳಲ್ಲಿ ವೆಂಕಟೇಶ

ತಿರುಮಲೆಯು ಪರಮ ಪವಿತ್ರವಾದ ಪ್ರಾಚೀನ ಕ್ಷೇತ್ರ. ಅದರ ಉಲ್ಲೇಖವು ತಮಿಳು ಸಂಘ ಸಾಹಿತ್ಯದಲ್ಲಿ ಸಿಕ್ಕುತ್ತದೆ. ಈ ತಿರುವೇಂಗಡವು ಆ ಕಾಲದಲ್ಲಿ ತಮಿಳು ನಾಡಿಗೂ ವಡಗರ ಪ್ರದೇಶಕ್ಕೂ ಸೀಮಾ ಪ್ರದೇಶವಾಗಿತ್ತು. 'ಶಿಲಪ್ಪಧಿಕಾರದಲ್ಲಿ (ಕ್ರಿ.ಶ. ೧ನೆಯ ಶತಮಾನ) ಈ ಬೆಟ್ಟವೇ ವೈಷ್ಣವ ಕ್ಷೇತ್ರವಾಗಿತ್ತೆಂಬುದು ಅಲ್ಲಿಯ 'ನೆಡಿಯೋನ್ ಕುನ್ರಂ' ಎಂಬ ಶಬ್ದದಿಂದ ಸೂಚಿತವಾಗುತ್ತದೆ. ವೈಷ್ಣವ ಆಳ್ವಾರುಗಳೆಲ್ಲ ಇಲ್ಲಿಯ ದೇವರನ್ನು ವೈಷ್ಣವದೇವರೆಂದೇ ಕೊಂಡಾಡಿದ್ದಾರೆ. ತಿರುಮಲೆಯ ಈಗ ಉಪಲಬ್ಧವಾಗಿರುವ ಶಾಸನಗಳೆಲ್ಲ ಕ್ರಿ ಶ. ೯ನೆಯ ಶತಮಾನದಿಂದೀಚಿನವಾದುದರಿಂದ ವೆಂಕಟೇಶನ ವಿಷಯವಾದ ಆದಿಕಾಲದ ಚರಿತ್ರೆಯನ್ನು ತಿಳಿಯಲು ಆಳ್ವಾರ್ರುಗಳ ಹೇಳಿಕೆಯೇ ಪರಮಾಧಾರ.

ತಮಿಳು ದೇಶದ ವೈಷ್ಣವ ಭಕ್ತರಿಗೆ ಆಳ್ವಾರ್ ಎಂದು ಹೆಸರು. ವಿಷ್ಣುಭಕ್ತಿಯಲ್ಲಿ ಮುಳುಗಿದವರು ಎಂದರ್ಥ. ಈಚಿನ ಚರಿತ್ರಕಾರರ ಅಭಿಪ್ರಾಯದಂತೆ ಇವರ ಕಾಲ ಕ್ರಿ ಶ. ೬ನೆಯ ಶತಮಾನದಿಂದ ೮ನೆಯ ಶತಮಾನದವರೆಗೆ. ಇವರು ೧೨ ಮಂದಿ. ಇವರು ಭಗವಂತನನ್ನು ಕುರಿತು ಕೊಂಡಾಡಿರುವ ಪದ್ಯಸಂಖ್ಯೆ ನಾಲ್ಕುಸಾವಿರ. ಇದಕ್ಕೆ ನಾಲಾಯಿರ ದಿವ್ಯಪ್ರಬಂಧವೆಂದು ಹೆಸರು. ಇವುಗಳಲ್ಲಿ ೧೦೮ ವೈಷ್ಣವಕ್ಷೇತ್ರಗಳ ದೇವರನ್ನು ಕುರಿತ ಸ್ತೋತ್ರಗಳಿವೆ. ಆಳ್ವಾರುಗಳಲ್ಲಿ ಮಧುರ ಕವಿಯಾಳ್ವಾರ್ರು ವಿನಾ ಉಳಿದವರೆಲ್ಲ ಈ ದಿವ್ಯ ದೇಶಗಳನ್ನು ಕುರಿತು ಹಾಡಿದ್ದಾರೆ. ಅವರ ಕವಿತೆಗಳಲ್ಲಿ ಕಾಣುವ ಕವಿತಾಮಾಧುರ್ಯವೂ ಕಲ್ಪನಾವಿಲಾಸವೂ ಅನ್ಯಾದೃಶವಾದುದು. ಆಳ್ವಾರ್ರುಗಳಲ್ಲಿ ಹತ್ತು ಜನ ತಿರುವೇಂಗಡವನ್ನು ಕುರಿತು ಸ್ತೋತ್ರಮಾಡಿದ್ದಾರೆ. ಅವರ ದೃಷ್ಟಿಯಲ್ಲಿ ಇತರ ಎಲ್ಲ ಕ್ಷೇತ್ರಕ್ಕಿಂತ ತಿರುವೇಂಗಡವು ಶ್ರೇಷ್ಠವೆಂದು ಭಾವನೆ, ಮುಂದೆ ಬಂದವರು ಶ್ರೀರಂಗವನ್ನು ಸಮವಾಗಿ ಕೊಂಡಾಡಿದ್ದರೂ ಆದಿ ಕಾಲದಲ್ಲಿ ತಿರುವೇಂಗಡಕ್ಕೇ ಅಗ್ರಸ್ಥಾನ. ಒಟ್ಟು ೪೦೦೦ ಪಾಶುರ (ಪದ್ಯ) ಗಳಲ್ಲಿ ಸುಮಾರು ೨೦೦ ಪದ್ಯಗಳು ತಿರುವೇಂಗಡಕ್ಕೂ ಶ್ರೀನಿವಾಸನಿಗೂ ಸಂಬಂಧಪಟ್ಟವು. ದಿವ್ಯ ಪ್ರಬಂಧಗಳಲ್ಲಿ ತಿರುವೇಂಗಡಕ್ಕೆ ಸಂಬಂಧಪಟ್ಟವನ್ನು ಸಂಖ್ಯಾದೃಷ್ಟಿಯಿಂದ ವಿಭಾಗಮಾಡಿದರೆ ಪೊಯ್‌ಗೈ ೧೦, ಪೂದತ್ತಾರ್ ೯, ಪೇಯ್ ೧೦, ತಿರುಮಳಿಶೈ ೧೮, ನಮ್ಮಾಳ್ವಾರ್ ೪೫, ಕುಲಶೇಖರ ೧೧. ಪೆರಿಯಾಳ್ವಾರ್ ೧, ಆಂಡಾಳ್ ೧೬, ತಿರುಪ್ಪಾಣಿ ೨, ಮತ್ತು ತಿರುಮಂಗೈ ೬೩ ಆಗುತ್ತದೆ. ಇದರಿಂದ ಪ್ರತಿಯೊಬ್ಬ ಆಳ್ವಾರ್ರಿಗೂ ವೆಂಕಟೇಶನಲ್ಲಿ ವಿಶೇಷ ಆಸಕ್ತಿಯಿತ್ತೆಂದೂ ಇತರ ಕ್ಷೇತ್ರಗಳಿಗಿಂತ ಹೆಚ್ಚು ಪೂಜ್ಯತೆಯಿತ್ತೆಂದೂ ವಿಶದವಾಗುತ್ತದೆ. ಈ ಆಳ್ವಾರುಗಳು ತಮಿಳುದೇಶದ ನಾನಾಕಡೆಗಳಲ್ಲಿ ಅವತರಿಸಿದವರು. ಮೊದಲ ನಾಲ್ವರು ಪಲ್ಲವರಾಜ್ಯದವರು ಕೊನೆಯ ಮೂರುಮಂದಿ ಚೋಳದೇಶದವರು. ಕುಲಶೇಖರರು ಚೇರನಾಡಿನವರು. ಉಳಿದವರು ಪಾಂಡ್ಯಭೂಮಿಜರು. ಇವರೆಲ್ಲರಿಗೂ ತಿರುಮಲೆ ಬಹುದೂರದಲ್ಲಿತ್ತು. ಆಗ ಸಂಚಾರ ಸೌಲಭ್ಯಗಳಾವುವೂ ಇರಲಿಲ್ಲ. ತಿರುವೇಂಗಡವು ಕಾಡಿನ ಮಧ್ಯದಲ್ಲಿ ಕ್ರೂರಮೃಗಗಳಿಂದ ಆವೃತವಾದ ಸ್ಥಳದಲ್ಲಿತ್ತು. ಆದರೂ ಎಲ್ಲವನ್ನು ಸಹಿಸಿಕೊಂಡು ಶ್ರೀನಿವಾಸನನ್ನು ಸಂದರ್ಶಿಸಬೇಕೆಂಬ ಆಶೆಯೇ ಆ ದೈವದಲ್ಲಿ ಅವರಿಗಿದ್ದ ಪೂಜ್ಯತೆಯನ್ನು ವ್ಯಕ್ತಪಡಿಸುತ್ತದೆ. ಅವರು ವೆಂಕಟೇಶನ ಶಂಖ ಚಕ್ರ ಗದಾ ಶಾರ್ಙ್ಗಾದಿ ಆಯುಧಗಳನ್ನು ಅವನ ವಕ್ಷಸ್ಥಳದಲ್ಲಿರುವ ದೇವಿಯನ್ನೂ ಅವನ ತುಳಸೀ ಮಾಲೆಯನ್ನೂ ವರ್ಣಿಸಿದ್ದಾರೆ. ಅವನನ್ನು ರಾಮ, ಕೃಷ್ಣ, ದಾಮೋದರ, ಹೃಷೀಕೇಶ, ಪದ್ಮನಾಭ ಎಂದು ಸಂಬೋಧಿಸಿದ್ದಾರೆ. ಇವರೇ ತಿರುವೇಂಗಡದಲ್ಲಿ ಬಂದು ನೆಲೆಸಿರುವನೆಂದು ತಿಳಿಸಿದ್ದಾರೆ. ಅವರ ಸ್ತೋತ್ರಗಳಲ್ಲಿ ದೇವಾಲಯವನ್ನಾಗಲಿ, ಉತ್ಸವಮೂರ್ತಿಗಳನ್ನಾಗಲಿ ನಿರ್ದೇಶಿಸಿಲ್ಲ ಎಲ್ಲರಿಗೂ ದರ್ಶನವೀವ ಸ್ವಾಮಿ ಎಂದಿದ್ದಾರೆ. ತಿರುಮಳಿಶೈಯಾಳ್ವಾರ್ರವರು ದೇವಾಲಯವಿಲ್ಲವೆಂದೇ ಸ್ಪಷ್ಟಪಡಿಸಿದ್ದಾರೆ. ಕುಲಶೇಖರರು 'ನಿನ್ನ ದೇಗುಲದ ಹೊಸ್ತಿಲಾಗಿ ಹುಟ್ಟಬೇಕೆಂದಿದ್ದೇನೆ' ಎಂಬ ಆಶೆಯನ್ನು ತೋರ್ಪಡಿಸಿಕೊಂಡಿದ್ದಾರೆ. ಎಲ್ಲರೂ ತಿರುವೇಂಗಡದ ಮೂರ್ತಿಯನ್ನು ವಿಷ್ಣುವೆಂದು ನಿರ್ದೇಶಿಸಿದ್ದರೂ ಪೇಯಾಳ್ವಾರ್ರವರು ಮಾತ್ರ ಅವರ 'ಮೂನ್ರಾಂತಿರುವಂದಾದಿ'ಯಲ್ಲಿ ವೆಂಕಟೇಶ್ವರನ ಹರಿಹರನ

ಡಾ॥ ಎನ್. ಅನಂತರಂಗಾಚಾರ್



ಊಪವನ್ನು ಮುಂದಿನ ಪದ್ಯದಲ್ಲಿ ಸ್ಪಷ್ಟಪಡಿಸಿದ್ದಾರೆ.

ತಾಳ್ ಶಡೈಯುಂ ನೀಳ್‌ಮುಡಿಯುಂ ಒಣ್
ಮಳುವುಂ ಶಕ್ಕರಮುಂ
ಶೂಳ್ ಅರವುಂ ಪೊನ್ನಾಣುಂ ತೋನ್ರುಂ
ಅಲ್-ಶೂಳುಂ
ತಿರಂಡು ಇರ್ರವಿ ಪಾಯುಂ ತಿರುಮಲೆ ಮೇಲ್
ಎಂತೈಕ್ಕು
ಇರಂಡುರುವಂ ಒನ್ರಾಯ್ ಇಶೈಂದು ॥

ನನ್ನ ಸ್ವಾಮಿಗೆ ಕೆಳಗೆ ಕಟ್ಟಿದ ಜಡೆಯೂ, ನೀಳವಾದ ಕಿರೀಟವೂ, ಸುಂದರವಾದ ಶೂಲವೂ, ಚಕ್ರವೂ, ಸೊಂಟದಲ್ಲಿ ಕಟ್ಟಿರುವ ನಾಗಾಭರಣವೂ ಸುವರ್ಣಮಯವಾದ ಉಡಿದಾರವೂ ಇದ್ದು ಹರಿಹರ ರೂಪದಲ್ಲಿ ಒಂದೇ ಮೂರ್ತಿಯಾಗಿ ತೋರುತ್ತಿರುವುದು ಆಶ್ಚರ್ಯವಾಗಿದೆಯಲ್ಲವೆ? ಈ ಪದ್ಯವನ್ನು ವಿಚಾರಮಾಡಿದರೆ ಮುಂದೆ ರಾಮಾನುಜಾಚಾರ್ಯರ ಕಾಲದಲ್ಲಿ ಶೈವ ವೈಷ್ಣವ ವಾದವೆದ್ದು ಅವರು ತಮ್ಮ ಅದ್ಭುತ ಶಕ್ತಿಯಿಂದ ವಿಷ್ಣುಮೂರ್ತಿಯನ್ನಾಗಿಸಿದರು ಎಂಬ ದಂತಕಥೆಯು ಅರ್ಥವಿಲ್ಲದಾಗುವುದು.

ಈ ಆಳ್ವಾರ್ರುಗಳ ಪ್ರಬಂಧಗಳಲ್ಲಿ ಮುಂದೆ ಬೆಳೆದು ಬಂದ ವಿಶಿಷ್ಟಾದ್ವೈತ ತತ್ತ್ವದ ಮೂಲ ರೂಪವನ್ನು ಕಾಣಬಹುದು. ಮುಂದೆ ಆಚಾರ್ಯರುಗಳು ಸೂತ್ರೀಕರಿಸಿದ ಅರ್ಥಪಂಚಕವನ್ನು ಆಳ್ವಾರ್ರರು ವಿವರಿಸಿದ್ದಾರೆ. ಆಳ್ವಾರ್ರುಗಳ ಅನುಭವವು ಭಗವತ್ಸ್ವರೂಪ, ಜೀವಸ್ವರೂಪ, ಮೋಕ್ಷೋಪಾಯಸ್ವರೂಪ, ಫಲಸ್ವರೂಪ, ವಿರೋಧಿಸ್ವರೂಪಗಳನ್ನು ಪ್ರತಿಪಾದಿಸುತ್ತವೆ. ಅದಕ್ಕನುಗುಣವಾಗಿ ಈ ತತ್ತ್ವಗಳೆಲ್ಲ ಅವರ ಹಾಡುಗಳಲ್ಲಿ ಹಾಸುಹೊಕ್ಕಾಗಿ ಸೇರಿಕೊಂಡಿವೆ. ಶ್ರೀಮನ್ನಾರಾಯಣನೇ ಸರ್ವನಿರ್ವಾಹಕ ಮತ್ತು ಸರ್ವಕಾರಣಿಕ (ಅರುಳುಂ ಕೇಡುಂ ಅವನ್ ಕಂಡಾಯ್, ಐಂಬುಲನಾಯ್ ನಿನ್ರಾನ್, ಅವನ್ ಕಂಡಾಯ್ ಕಾತ್ತು, ತೀ, ನೀರ್‌ವಾನ್, ಕರುವರ್ಕೈ ಮಣ್, ಕಾರ್, ಓದಂ ಶೀತ್ತಂ, ತೀ ಅವಾಗುಂ ಶೆನ್ರು) ಅವನು ಸರ್ವಜಗತ್ಕಾರಣ (ಆದಿಕಾರಿವಣ್ಣಂ) ಸರ್ವಾಂತರ್ಯಾಮಿ (ಮನತ್ತುಳ್ಳಾನ್ ವೇಂಗಡತ್ತಾನ್ ಮಾಕಡಲಾನ್ ಮತ್ತಂ ನಿನೈಪ್ಪರಿಯ ನೀಳ್ ಅರಂಗತ್ತುಳ್ಳಾನ್) ಬ್ರಹ್ಮಾದಿಗಳನ್ನು, ವೇದಾದಿಶಾಸ್ತ್ರಗಳನ್ನು ಸೃಷ್ಟಿಸಿದವನವನು (ಮರೈನಾನ್ಗುಂ ಉಣರ್‌ನ್ದಾಯ್ ಮುನ್ನಾಳ್ ಪಲನೂಲ್ ಅಳಂದಾನೈ), ಅವನನ್ನು ಬಿಟ್ಟು ಮತ್ತೆಲ್ಲವೂ ಅವನಿಗೆ ಶೇಷಭೂತವಾಗಿದೆ. (ತನಕ್ಕಡಿಮೈಪಟ್ಟದು ತಾನ್ ಅರಿಯಾನೇಉಂ ಮನತ್ತುದೈಯ ವೈಪ್ಪದಾಂ ಮಾಲೈ), ಭಗವಂತನ ಪರಮಪದವನ್ನು ಸೇರುವುದೇ ಪುರುಷಾರ್ಥ (ಪುಹಲಿಡಂ ಪಾರ್‌ತ್ತು ಅಂಗೇ ಇಡುಂದು ಏತ್ತವಾಳುಂ ಇದು ತುಣಂದರ್ದೇನ್.) ಅವನ ಪಾದವನ್ನು ಸೇರಿದಮೇಲೆ ಲಭ್ಯವಾಗದ ಫಲವೇ ಇಲ್ಲ. (ಎಂಗಳ್ ಪೆರುಮಾನ್ನೈ ಪಣ್ಣಿ ಕೈತೊಳದು ಪಿನ್ ಮಣ್ಣುಲಹಂ ಆಳೇನೋ? ವಾನವರ್ಕುಂ ವಾನವನಾಯ್ ವಿಣ್ಣುಲಹಂ ತನ್ನ ಹತ್ತು ಮೇವೇನೇ.) ಭಗವಂತನನ್ನು ನಾಧಿಸುವ ಮಾರ್ಗ ಇಂದ್ರಿಯನಿಗ್ರಹ (ತುಂಬ ನಿನ್ರು ಐಂಬುಲನಂ ಐಂದುಂ ಅಗತ್ತು) ಶ್ರಿಯಃಪತಿಯೇ ಪದತತ್ತ್ವವೆಂಬುದನ್ನು ಅವನ ಎರಡು ಪುಂಡರೀಕಾಕ್ಷಿಗಳೇ ಸಿದ್ಧಾಂತಮಾಡುವುವು. ಇನ್ನುಳಿದ ಸಮಸ್ತ ವಸ್ತುವನ್ನು ತನಗೆ ಶರೀರವಾಗಿ ಹೊಂದಿರುತ್ತಾನೆ. (ಇರು ಎಲನುಂ ಮಾಲ್ ವಿಶುಂಬಂ ಕಾತ್ತುಂ ನೆರುಂಗ ಉರುವುಂ ಅವಾನ್ ನೀರಾಯ್ ನಿಲನಾಯ್ ತೀಯಾಯ್

# ಶ್ರೀ ಪದ್ಮಾವತೀ ದೇವಾಲಯ



## ಆರ್ಜಿತ ಅಭಿಷೇಕ

ತಿರುಚಾನೂರಿನಲ್ಲಿನ ಶ್ರೀ ಪದ್ಮಾವತೀದೇವಿಯವರಿಗೆ ಪ್ರತಿ ಶುಕ್ರವಾರವೂ ಆರ್ಜಿತ ಅಭಿಷೇಕ ಸೇವೆ ಏರ್ಪಾಟು ಮಾಡಲಾಗಿದೆ. ಟಿಕೆಟ್ಟಿಗೆ ರೂ. 100/- ಸಲ್ಲಿಸಿ ಗೃಹಸ್ಥರು ಭಾಗವಹಿಸಬಹುದು. ಗೃಹಸ್ಥರು, ಅವರ ಸಂಬಂಧೀಕರು ಒಟ್ಟು ಇಬ್ಬರು ಕ್ಷೀರ ಪಾತ್ರೆಗಳನ್ನು ಆಲಯದಲ್ಲಿ ಮೆರವಣಿಗೆಯಲ್ಲಿ ಕೊಂಡು ಹೋಗಲು ಅನುಮತಿಸಲ್ಪಡುವರು. ಅನಂತರ ಅವರು ಅಭಿಷೇಕ ದರ್ಶನ ಮಾಡಬಹುದು. ಆದರೆ ಪ್ರಸಾದಮಾತ್ರ ಕೊಡಲ್ಪಡುವುದಿಲ್ಲ. ಭಕ್ತರು ಈ ಸದವಕಾಶವನ್ನು ಉಪಯೋಗಿಸಿಕೊಳ್ಳಬಹುದು.

ಕಾಲಾಯ್ ನೆಡುವಾನಾಯ್) ಭಗವಂತನನ್ನು ಪಡೆಯುವುದಕ್ಕೆ ಶಾಸ್ತ್ರಜ್ಞಾನ, ಇಂದ್ರಿಯನಿಗ್ರಹ, ಶುದ್ಧಮನಸ್ಸು ನಿರಂತರಧ್ಯಾನ – ಇವು ಅತ್ಯಾವಶ್ಯಕ. (ಮತ್ತೈನಾನ್ಗುಂ ಓದಿ ಅರಿತೆನ್ನುಂತಾಳ್ ಕೋಳವಿ ಐಂಬುಲನಂ ಶೆರಿವು ಎನ್ನುಂ ತಿಣ್ ಕದವುಂ ಶೆಮ್ಮಿ ನಮ್ಗು ಉಣವಾಕರ್) ಪರಮಾತ್ಮನನ್ನು ಭಕ್ತಿಯ ಬಲೆಯಲ್ಲಿ ಬಂಧಿಸಿದರೆ ತನ್ನ ಮನಸ್ಸಿನಿಂದ ಹೊರಗೆ ಹೋಗಲಾರ (ಉಯರ್ತ್ತು ಉಣರ್ವು ಎನ್ನುಂ ಒಳಿಕೊಳ್ ವಿಳಕ್ಕು ಏತ್ತಿ ಅವನ್ನೈ ನಾಡಿವೈತ್ತು ವಲ್ಯೆಪಡುತ್ತೇನ್)

ಈ ಭಾವಗಳನ್ನು ಎಲ್ಲ ಆಳ್ವಾರುಗಳೂ ಶ್ರೀನಿವಾಸನನ್ನು ಕುರಿತು ಹಾಡುವಾಗ ಅವನಿಗೆ ನಿರೂಪಿಸಿ ಸ್ತೋತ್ರಮಾಡುತ್ತಾರೆ.

ಮೊದಲು ಮೂರು ಆಳ್ವಾರುಗಳಲ್ಲಿ ಪೊಯ್ಗೈ ಕಂಚಿಯಲ್ಲಿ ಜನಿಸಿದವರು. ಅವರ ಮಾತಿನ ಪ್ರಕಾರ ವೆಂಕಟೇಶನು ಸ್ವಯಂ ಉದ್ಭವ ಮೂರ್ತಿ. ಪೂದತ್ತಾಳ್ವಾರ್ ಮಹಾಬಲಿಪುರ (ಮಾಮಲ್ಲೈ) ದಲ್ಲಿಯೂ ಪೇಯಾಳ್ವಾರ್‌ರವರು ಮಯಿಲಾಪುರ (ಮೈಯಿಲ) ದಲ್ಲಿಯೂ ಜನಿಸಿದವರು. ಇವರು ಮೂವರೂ ವೆಂಕಟಾಚಲಪತಿಯ ಸಂದರ್ಶನಕ್ಕೆ ಬಂದುದು ಬೆಟ್ಟದ ಮೇಲಿನ ಸ್ವಾಮಿಯ ಆಕರ್ಷಣೆಯಿಂದಲೇ. ಪೂದತ್ತಾಳ್ವಾರ್‌ರವರು ತಿರುವೇಂಗಡದ ವಿಷಯವಾಗಿ ಆಡಿರುವ ಮಾತುಗಳಿವು –

ಅದು ಬಿದಿರುಮೆಳೆಗಳಿಂದ ತುಂಬಿದ ದೊಡ್ಡ ಬೆಟ್ಟ. ಭಗವಂತನು ನಿತ್ಯಸೂರಿಗಳಿಗೆ ಉಪಕಾರಕನಾಗಿ ತನ್ನ ದರ್ಶನವನ್ನು ಕೊಡುತ್ತಿರುವ ದಿವ್ಯ ಕ್ಷೇತ್ರ. ನಿತ್ಯಸೂರಿಗಳ ಮನಸ್ಸಿನಲ್ಲಿ ನಿಂತವನೂ ಕ್ಷೀರ ಸಾಗರದಲ್ಲಿರುವವನೂ ಹಿಂದೆ ಕೃಷ್ಣಾವತಾರದಲ್ಲಿ ಶತ್ರುಸಂಹಾರ ಮಾಡಿದವನೂ ಅವನೇ. ನಾನು ತಿರುಮಲೆಯಲ್ಲಿ ನಿಂತು ವಿಸ್ತಾರವಾದ ನನ್ನ ಮನೋರಥವನ್ನು ಪಡೆದಾಗ ನನ್ನ ಮನಸ್ಸು ಚಂದ್ರನನ್ನೂ ದಾಟಿ ಅಂಡಭಿತ್ತಿಯನ್ನೂ ಸೇರಿ ಸರ್ವಾಧಿಕನಾದ ಸರ್ವೇಶ್ವರನನ್ನು ಹುಡುಕುತ್ತ ಹೋಗಿದೆ. (ಪತಿ ಅನ್ವೈಂದು ನಾಡಿ ಪರತ್ತು ಎಳುಂದ ಶಿಂದ್ಯೆ ಮತಿ ಉರುಂಜಿ ವಾರ್ ಮುಹೂದು ನೋಕ್ಕಿ ಕರೆಮಿಹುತ್ತು) ವೇದ ಪ್ರತಿಪಾದ್ಯನಾದ ವೆಂಕಟೇಶನ ಕ್ಷೇತ್ರದಲ್ಲಿ ದೇವತೆಗಳು ಭಕ್ತಿಯಿಂದ ಸ್ತೋತ್ರಮಾಡುತ್ತಾರೆ. ಇದು ಸುಂದರವಾದ ತೋಪುಗಳಿಂದ ಕೂಡಿದ ಸ್ಥಳ. 'ವೇದ ಪ್ರತಿಪಾದ್ಯಳಾದ ಲಕ್ಷ್ಮೀದೇವಿಯನ್ನು ಸಂಶ್ಲೇಷಗೊಂಡು ಸಂಸಾರಿಗಳು ಸುಖವಾಗಿ ಬಾಳಲಿ'— ಎಂದು ತಿರುವೇಂಗಡನು ಬಂದು ನೆಲೆಸಿದ್ದಾನೆ. ತಿರುಮಲೆಯಲ್ಲಿ ಭಕ್ತಾದಿಗಳು ಬಂದು ಸ್ಥಿರವಾಗಿ ನಿಂತು ತಪಸ್ಸು ಮಾಡುತ್ತಿರುವುದರಿಂದ ಅವರು ಬೆಟ್ಟಗಳಂತೆಯೂ ಅವರ ಕೇಶಪಾಶಗಳು ಹೂವಿನ ಲತೆಗಳಂತೆಯೂ ಕಾಣುತ್ತವೆ. ತಿರುಮಲೆ ಕ್ಷೇತ್ರವು ಇತರ ಎಲ್ಲಾ ಕ್ಷೇತ್ರಗಳಿಗಿಂತ ಪರಮ ಪವಿತ್ರವಾದುದು. ಇಲ್ಲಿ ಗಂಡಾನೆಗಳು ಹೆಣ್ಣಾನೆಗಳಿಗೆ ಬಿದಿರಿನ ಕಳಿಕೆಗಳನ್ನು ಜೇನು ತುಪ್ಪದಿಂದ ಕಲಸಿ ಊಡಿಸುತ್ತವೆ. ಇಂತಹ ತಿರುವೇಂಗಡ ನಾಥನನ್ನು ಎಲ್ಲರೂ ಸ್ತುತಿಸಿ ಬಾಳಿ.

ಪೇಯಾಳ್ವಾರ್‌ರವರು ತಮ್ಮ 'ಮೂನ್ರಾಂತಿರುವಂದಾದಿ'ಯಲ್ಲಿ ತಿರುವೇಂಗಡದ ವಿಷಯವಾಗಿ ಈ ರೀತಿ ಉಲ್ಲೇಖಿಸಿದ್ದಾರೆ.

ಭಗವಂತನು ಕಾಂಚೀಪುರದಲ್ಲಿ ಆದಿಶೇಷನ ಮೇಲೆಯೂ ತಿರುವೇಂಗಡದಲ್ಲಿ ತಿರುವೇಕಾವಿನಲ್ಲಿಯೂ ನೆಲೆಸಿದ್ದಾನೆಂದು ಹೇಳುತ್ತಾರೆ. ಆದರೆ ಅವನು ನನ್ನ ಮನಸ್ಸಿನಿಂದ ಎಂದಿಗೂ ಹೋಗಲಾರ. ಅವನು ಆ ಎಲ್ಲ ಕ್ಷೇತ್ರಗಳಲ್ಲಿ ನೆಲೆಸಿರುವಂತೆ ನನ್ನ ಮನಸ್ಸಿನಲ್ಲಿಯೂ ನೆಲೆಸಿದ್ದಾನೆ. ತಿರುಮಲೆಯ ಬೆಟ್ಟ ಚಂದ್ರನನ್ನು ಮುಟ್ಟುವಷ್ಟು ಎತ್ತರವಾಗಿದೆ. ಅಲ್ಲಿಯ ಸ್ವಾಮಿಯು ಉಭಯ ವಿಭೂತಿ ನಿರ್ವಾಹಕ. ಭೂಮ್ಯಾಕಾಶಗಳೆರಡರ ಒಡೆಯ. ಅವನು ಸ್ಥಿರವಾಗಿ ನನ್ನ ಮನಸ್ಸಿನಲ್ಲಿ ನೆಲೆಸಲು ಮನಸ್ಸುಮಾಡಿದ್ದಾನೆ. ಅವನ ಸಂಕಲ್ಪವೇ ನಮ್ಮ ಇರುವಿಕೆಗೆ ಕಾರಣ. ಎಲ್ಲರೂ ತನ್ನನ್ನು ಸೇರಿ ಧನ್ಯರಾಗಲೆಂದು ಅವನು ವೆಂಕಟಾದ್ರಿಯಲ್ಲಿ ನೆಲೆಸಿದ್ದಾನೆ. ಇದಕ್ಕೆ ಅವನ ಪರಮ ಸೌಲಭ್ಯವೇ ಕಾರಣ. ಅದಕ್ಕಾಗಿಯೇ ಅವನು ತನ್ನ ಪಾದಗಳನ್ನು ಬೆಳೆಸಿದ್ದಾನೆ.

ತಿರುಮಳಿಶೈ ಆಳ್ವಾರ್‌ರವರು ತಮ್ಮ 'ನಾನ್ಮುಹನ್ ತಿರುವಂದಾದಿ' ಯಲ್ಲಿ ತಿರುವೇಂಗಡದ ವಿಷಯವಾಗಿ ಪ್ರದರ್ಶಿಸಿರುವ ಭಾವಗಳು ಹೀಗಿವೆ –

ವೆಂಕಟಾದ್ರಿಯು ಸರ್ವರೋಗಗಳನ್ನು ಅವುಗಳಿಗೆ ಕಾರಣವಾದ ಕರ್ಮಗಳನ್ನು ಪರಿಹರಿಸುವುದಾದ್ದರಿಂದ ಆ ಸ್ವಾಮಿಯನ್ನು ನಾನು ಆಶ್ರಯಿಸಿದ್ದೇನೆ. ಅಲ್ಲಿಯ ಜಲಪ್ರವಾಹವು ರತ್ನಮಿಶ್ರಿತವಾಗಿ ಬೀಳುತ್ತಿರಲು ಅದರ ಕಾಂತಿಯನ್ನು ಕಂಡು ಆನೆಗಳು ಬೆಂಕಿಯೆಂದು ಹೆದರಿ ಓಡುವುವು. ಸರ್ಪವು ಮಿಂಚೆಂದು ಹೆದರಿ ಹುತ್ತವನ್ನು ಹೋಗಿ ಸೇರುವುವು. ಅಂತಹ ಸ್ವಾಮಿಯನ್ನು ಸೇರಲು ಆತುರ ಪಡುತ್ತಿದ್ದೇನೆ. ವೆಂಕಟಾದ್ರೀಶನ ನಾಮೋಚ್ಚಾರಣೆಯನ್ನು ಒಂದುಸಲ ಮಾಡುವುದರಿಂದಲೇ ಅತಿಕಷ್ಟವಾದ ಮೋಕ್ಷವನ್ನು ಪಡೆಯಲು ಸಾಧ್ಯವಾಗುವುದರಿಂದ ಆ ವೇದ ಪ್ರತಿಪಾದ್ಯಳಾದ ಶ್ರೀದೇವಿಯ ಪತಿಯ ಭಕ್ತಿಜಾಲದಲ್ಲಿ ತೊಡರಿಕೊಂಡಿದ್ದೇನೆ. ದೇಹವಿರುವವರೆಗೆ ಜ್ಞಾನಾಜ್ಞಾನಾವಸ್ಥೆಗಳಲ್ಲಿಯೂ ಹಿತ ಚಿಂತಕನಾಗಿರುವ ವೆಂಕಟೇಶನನ್ನು ಸರ್ವದಾ ಸ್ತೋತ್ರ ಮಾಡಿ. ನಿರತಿಶಯ ಭೋಗ್ಯವಾದ ಅವನ ಪಾದ



ಗಳಿಗೆ ಭಕ್ತಿಯಿಂದ ಪುಷ್ಪಾರ್ಚನೆಯನ್ನು ಮಾಡಿ. ಚಂದ್ರನನ್ನು ವೆಂಕಟೇಶನಿಗೆ ನಂದಾದೀಪವನ್ನಾಗಿ ಮಾಡಬೇಕೆಂದು ಆನೆಗಳು ತಮ್ಮ ಸೊಂಡಿಲನ್ನು ಎತ್ತಿರುವಾಗ ಬೇಡರು ಅದನ್ನು ಕಂಡು ಸುತ್ತುವರಿದಿರುವರು. ಅಲ್ಲಿಯ ಕುರುವರ ಸ್ತ್ರೀಯರು ಬಿಲ್ಲನ್ನು ಹಿಡಿದು ಎದುರಿಸುತ್ತಿರುವರು. ಇಂತಹ ಸ್ಥಳದಲ್ಲಿಯೇ ಪಂಡಿತಪಾಮರರಿಗೆ ಆಶ್ರಯನಾದ ತಿರುವೇಂಗಡಸ್ವಾಮಿಯು ನೆಲಸಿರುವುದು. ಇಲ್ಲಿಯ ವನ್ಯ ದುಷ್ಟ ಮೃಗಗಳೂ ಸ್ವಾಮಿಯನ್ನು ಏಕಾಗ್ರಚಿತ್ತದಿಂದ ಸೇವಿಸುವುವು. ಪರಮಪದವಾಸಿಗಳಾದ ನಿತ್ಯಸೂರಿಗಳೂ ವೆಂಕಟೇಶನನ್ನು ಪುಷ್ಪಗಳಿಂದ ಅರ್ಚಿಸುತ್ತಿರುವರು. ಅವರಂತೆ ಎಲ್ಲರೂ ಪೂಜಿಸಿ ಕೃತಾರ್ಥರಾಗಿರಿ.

ಕುಲಶೇಖರಾಳ್ವಾರರು ತಮ್ಮ 'ಪೆರುಮಾಳ್ ತಿರುಮೊಳಿ'ಯಲ್ಲಿ ತಿರುಮಲೆಯ ವಿಷಯವಾಗಿ ಆಡಿರುವ ಮಾತುಗಳು ಬಹು ಮಾರ್ಮಿಕವಾಗಿವೆ.

> ವೇಂಗಡವಾ ನಿರ್ಕೋಯಿಲ್ ವಾಶಲ್
> ಅಡಿಯಾರುಂ ವಾನವರುಂ ಅರಂಬೆಯರುಂ
> ಕಿಡಂದಿಯಂಗುಂ
> ಪಡಿಯಾಯ್ ಕಿಡಂದು ಉನ್ ಪವಳವಾಯ್
> ಕಾಣ್ಬೇನೋ ॥

(ವೇಂಗಡದ ಸ್ವಾಮಿಯೇ ತಿರುಮಲೆಯಲ್ಲಿರುವ ನಿನ್ನ ಆಲಯದ ಬಾಗಿಲಿನಲ್ಲಿ ನಾನು ನಿನ್ನ ಭಕ್ತರೂ ದೇವತೆಗಳೂ ಅಪ್ಸರೆಯರೂ ಸಂಚರಿಸುವ ಮೆಟ್ಟಿಲಾಗಿದ್ದು ಹವಳದಂತೆ ಸುಂದರವಾದ ನಿನ್ನ ತುಟಿಯನ್ನು ಕಾಣುತ್ತಿರಬೇಕೆಂಬ ಆಶೆ.)

ನಪ್ಪಿನ್ನೈ ಪಿರಾಟ್ಟಿಗಾಗಿ ಸಪ್ತ ವೃಷಭಗಳನ್ನು ನಿರಸನ ಮಾಡಿದ ವೆಂಕಟನಾಯಕನಿಗೆ ಸೇವೆ ಮಾಡುವುದನ್ನು ಬಿಟ್ಟು, ಅನಿತ್ಯವಾದ ಐಶ್ವರ್ಯ ವನ್ನುಳ್ಳ ಮನುಷ್ಯ ಜನ್ಮವನ್ನು ಆಶಿಸುವುದಿಲ್ಲ. ಭಗವಂತನ ನಿತ್ಯಾನುಭವದಿಂದ ಹಿಗ್ಗುತ್ತಿರುವ, ಶ್ರೀ ಪಾಂಚಜನ್ಯವನ್ನು ಕೈಯಲ್ಲಿ ಹಿಡಿದಿರುವ ಸ್ವಾಮಿಯಿರುವ ತಿರುಮಲೈಯಲ್ಲಿ ಒಂದು ಬಕ ವಾಗಿ ಜನಿಸಲು ಆಸಿಸುತ್ತೇನೆ.

ತೇನಾರು ಪೂಂ ಶೋಲ್ವಿ ತಿರುವೇಂಗಡ
ಚ್ಚುನೈಯಿಲ್
ಮೀನಾಯ್ ಪಿರಕ್ಕುಂ ವಿದಿಯುಡ್ಡೈಯೇ
ನಾವೇನೇ ॥

(ಮಕರಂದ ತುಂಬಿ ಹರಿಯುವ ಹೂಗಳಿಂದ ತುಂಬಿರುವ ಪುಷ್ಕರಿಣಿಗಳಿಂದ ಕೂಡಿದ ತಿರು ವೇಂಗಡದ ಒಂದು ಪ್ರವಾಹದಲ್ಲಿ ಒಂದು ಮೀನಾಗಿ ಜನಿಸುವ ಅದೃಷ್ಟವನ್ನು ನಾನು ಪಡೆಯಬಾರದೇ)

ವಂಡಿನಂಗಳ್ ಪಣ್ ಪಾಡುಂ ವೇಂಗಡತ್ತು
ಶೆಣ್ಬಗಮಾಯ್ ನಿರ್ಕುಂ ತಿರುವುಡೈಯೇ
ನಾವೇನೋ ॥

( ದುಂಬಿಗಳು ಪಾಡುವ ತಿರುಮಲೆಯಲ್ಲಿ ಒಂದು ಸಂಪಿಗೆಯ ಮರವಾಗಿ ನಿಲ್ಲುವ ಸಂಪತ್ತನ್ನು ನಾನು ಪಡೆಯುವಂತಾಗಲಿ. )

ಅಷ್ಟಕ್ಕೆನಿಲ್ಲದೆ ಅವರು ತಿರುಮಲೆಯಲ್ಲಿ ಒಂದು ಸುಂದರವಾದ ಶಿಖರವಾಗಲಿ, ಅಲ್ಲಿ ಹರಿಯುವ ಒಂದು ನದಿಯಾಗಲಿ, ವೈಷ್ಣವರು ಸಂಚರಿಸಲು ಯೋಗ್ಯವಾದ ಒಂದು ಹಾದಿಯಾಗಲಿ, ಆಗ ಬಾರದೇ ಎಂದು ಹಂಬಲಿಸುತ್ತಾರೆ.

ತಿರುಮಂಗೈ ಆಳ್ವಾರ್ರು ಹಾಡಿರುವ ಪಾಶುರ ಗಳು ೧೦೮೪. ಅವುಗಳಲ್ಲಿ ತಿರುಮಲೆಯನ್ನು ಕುರಿತುದು ೬೪.

ವಿಶಾಲವಾದ ಸಮುದ್ರದಿಂದ ಸುತ್ತು ವರಿಯಲ್ಪಟ್ಟ ಲಂಕಾಪುರಿಗೆ ಒಡೆಯನಾದ ರಾವಣನ ಬಲವಾದ ಶರೀರವನ್ನು ಸೀಳುವಂತೆ ಬಾಣಪ್ರಯೋಗಮಾಡಿದವನೂ ದೇವತೆಗಳು ಬಂದು ಸೇವಿಸುವ ತಿರುಮಲೆಯಲ್ಲಿರುವ ಪೆರು–ಮಾಳ್ ಆದವನು ನಮ್ಮ ದುಃಖವನ್ನು ಹೋಗ ಲಾಡಿಸಬೇಕು.

ಇದಕ್ಕೆ ಮುಂಚೆ ಲೋಕದವರೊಡನೆ ಸೇರಿ ಕೊಂಡು ಅವರು ಇಚ್ಛಿಸಿದ ವಿಷಯಗಳನ್ನೇ ಇಚ್ಛಿಸುತ್ತ ಅವರಾಡುವ ಮಾತುಗಳನ್ನೇ ಆಡುತ್ತ ಇದ್ದ ಹೇ ಮನಸ್ಸೇ! ಈಗ ನಾನು ಹೇಳುವುದನ್ನು ಕೇಳು; ಎಷ್ಟೋಜನ ಭಗವಂತನ ಗುಣಗಳನ್ನು ಹಾಡಿಯೂ ಕುಣಿದೂ ಆಶ್ರಯಿಸಿಯೂ ಸ್ತುತಿಸಿಯೂ ಯಾರನ್ನು ಸಾಕ್ಷಾತ್ಕರಿಸುವು ದಕ್ಕಾಗುವುದಿಲ್ಲವೋ, ಬ್ರಹ್ಮರುದ್ರಾದಿಗಳೂ ನೆಲೆ ನಿಂತ ಯಾರನ್ನು ಬಂದು ಸೇವಿಸುವರೋ, ಯಾವನು ಕುಡಕ್ಕೂತ್ತಾಡಿದವನೋ – ಅಂತಹ ಸ್ವಾಮಿಯಲ್ಲಿ ಕೈಂಕರ್ಯವನ್ನು ಕೈಕೊಂಡು ಧನ್ಯ ನಾದೆ.

ಆಶ್ಚರ್ಯವಾದ ಗುಣಗಳುಳ್ಳವನೇ, ನಮಗೆ ಪುರುಷಕಾರಳಾದ ಶ್ರೀದೇವಿಯ ವಲ್ಲಭನೇ, ಬೆಟ್ಟದ ಮೇಲಿಂದ ಹರಿಯುವ ಜೇನಿನ ಹೊಳಪನ್ನುಳ್ಳ ತಾವರೆಯ ತಟಾಕವುಳ್ಳದ್ದೂ ಆದ ತಿರು ಮಲೆಯಲ್ಲಿ ವಾಸಿಸುವವನೇ, ಯಾವ ವಿಧವಾದ ಆಧಾರವಿಲ್ಲದವನೂ ಪಾಪವನ್ನೇ ಮಾಡಿ ಪಾಪಿಷ್ಠನಾದವನೂ ಒಂದು ಉಪಾಯವನ್ನೂ ಅರಿಯ ದವನೂ ಆದ ನಾನು ನಿನ್ನನ್ನೇ ನಂಬಿ ನಿನ್ನ ಪಾದದಲ್ಲಿ ಶರಣಾದವನಾಗಿದ್ದೇನೆ. ನನ್ನನ್ನು ನಿನ್ನ ಕಿಂಕರನನ್ನಾಗಿ ಮಾಡಿಕೊಂಡು ಕರುಣಿಸು.

( 27ನೇ ಪುಟ ನೋಡಿ )

## ಯುವವಾಣಿ

# ಕವಿಯಾಗಿ ಶ್ರೀ ವಿವೇಕಾನಂದ

ಶ್ರೀ ರಾಮಕೃಷ್ಣ ಪರಮಹಂಸರಿಂದ ಆಶೀರ್ವದಿಸಲ್ಪಟ್ಟ ಶ್ರೀ ವಿವೇಕಾನಂದರು–ಕವಿಗಳಾಗಿದ್ದವರು. ತಾತ್ತ್ವಿಕರೇ ಆದರೂ ಕವಿಯಾದವರು. ಆಧುನಿಕ ಶಂಕರ ಭಗವತ್ಪಾದರೆನ್ನಬಹುದಾದಂತಹವರು ವಿವೇಕಾನಂದರು. ಅವರನ್ನು ಮಹಾಯೋಗಿ ಎಂದೋ ಮಹಾ ವಕ್ತಾರನೆಂದೋ ಲೋಕ ಗುರುತಿಸಿದೆ. ಲೋಕ ದೃಷ್ಟಿಯಲ್ಲಿ 'ಕವಿ' ಪಟ್ಟ ಋಷಿಪಟ್ಟಕ್ಕಿಂತ ಒಂದು ಹಂತ ಕೆಳಗಿನದು. 'ನಾನೃಷಿಃಕುರುತೇಕಾವ್ಯಂ' ಎಂದರೂ ಋಷಿಸ್ಥಾನೀಯರು 'ಬ್ರಹ್ಮವಿದ್ ಬ್ರಹ್ಮೈವ ಭವತಿ'. ಆದರೆ ಋಷಿಗಳೆಲ್ಲ ಕಾವ್ಯಪ್ರಪಂಚ ನಿರ್ಮಾಪಕರಲ್ಲ. ಹಾಗೆಂದು ಅವರೆಲ್ಲ ಬರೆಯಲು ಬಾರದವರಲ್ಲ. ಶ್ರೀರಮಣ ಮಹರ್ಷಿಗಳ ಶಿಷ್ಯ ಗುಡಿಪಾಟಿ ವೆಂಕಟಾಚಲಂ ಹೇಳಿದಂತೆ 'ಒಬ್ಬ ಮಹರ್ಷಿಯ ಮೌನವೇ ಮಹಾಕಾವ್ಯ.' ಶಂಕರ ಭಗವತ್ಪಾದರು ಕಾಳಿದಾಸನಿಗಿಂತ ಮೇಲಣ ಸ್ತರದ ಕವಿ ಎಂಬುದು ಹಲವು ಹಿರಿಯರ ಅಭಿಪ್ರಾಯ. ವಿವೇಕಾನಂದರು ಪಾರಿವ್ರಾಜಕ ಸಾರ್ವಭೌಮರಾಗದೆ ಇದ್ದಿದ್ದಲ್ಲಿ ಪ್ರಪಂಚ ಚರಿತ್ರೆಯಲ್ಲಿ ಮಹಾಕವಿಯಾಗಿ ಶಾಶ್ವತವಾಗಿ ನಿಲ್ಲುತ್ತಿದ್ದರೆಂಬುದರಲ್ಲಿ ಸಂದೇಹವಿಲ್ಲ. ಶ್ರೀರಾಮಕೃಷ್ಣ ಪರಮಹಂಸರ ಆಶೀರ್ವಾದ ಪ್ರಭಾವ ಅಂತಹುದು.

ವಿಶ್ವಕವಿ ರವೀಂದ್ರರು ಸ್ವಾಮಿವಿವೇಕಾನಂದರ ಶೈಲಿ ವಿಶಿಷ್ಟವಾದುದು ಎಂದು ಪ್ರಶಂಸಿಸಿದ್ದಾರೆ. ಅಂದಿನ ವಿಶ್ವಕವಿಯಿಂದ ಆರಂಭಿಸಿ ಇಂದಿನ ಬಂಗಾಲಿ ಕವಿಗಳ ಅಗ್ರೇಸರ 'ಕುಮಾರನ್ ಆಶಾನ್' ಸಾಹಿತ್ಯ ಬಹುಮಾನ ವಿಜೇತ ಸುಭಾಷ್ ಮುಖ್ಯೋಪಾಧ್ಯಾಯ, ಹಲವಾರು ಬಂಗಾಳಿಕವಿಗಳು, ಮ್ಯಾಕ್ಸ್‌ಮುಲ್ಲರ್, ಪ್ರೊ. ಡೆನ್ಸನ್, ರೊಮೆನ್ ರೋಲೆಂಡ್, ವಾಲ್ಟ್‌ವಿಟ್‌ಮನ್ ಮೊದಲಾದ ಮಹಾಮಹಾ ಪಂಡಿತರೆಷ್ಟೋ ಮಂದಿ ವಿವೇಕಾನಂದರ ಶೈಲಿಯನ್ನು ಪ್ರಶಂಸಿಸಿದ್ದಾರೆ. ಕಲ್ಕತ್ತೆಯ ಪ್ರಸಿಡೆನ್ಸಿ ಕಾಲೇಜಿನ ವಿದ್ಯಾರ್ಥಿಯಾಗಿ ಬಿ. ಎ. ಪರೀಕ್ಷೆಯಲ್ಲಿ ಆಂಗ್ಲ ಭಾಷೆಯಲ್ಲಿ 44% ಅಂಕಗಳನ್ನು ಪಡೆದ ವಿದ್ಯಾರ್ಥಿ ಎಲ್ಲಿ! ಗಂಗಾ ತರಂಗಿಣಿಯಂತಹ ವಾಗಮೃತಧಾರೆಯ ವರ್ಷವೆಲ್ಲಿ! ವಿದೇಶೀಯರು ವಿವೇಕಾನಂದರನ್ನು 'A lightning orator', An orator by birthright', 'A divine orator' ಎಂದು ಕರೆಯುತ್ತಿದ್ದರು. ಅವರ ಮಾತೆಲ್ಲವೂ ಕಾವ್ಯವೇ ಆದರೂ ಪ್ರಕೃತದಲ್ಲಿ ಅವರ ಪದ್ಯಗಳಲ್ಲಿ ಹಲವನ್ನು ಮಾತ್ರವೇ ಪ್ರಶಂಸಿಸಲಾಗಿದೆ. ಬಾಣ ದಂಡಿ ಮೊದಲಾದ ಮಹಾಕವಿಗಳ ವಚನ ಗ್ರಂಥಗಳಲ್ಲಿ ಪ್ರದರ್ಶಿಸಿದ ಕವಿತಾಧ್ವನಿಯನ್ನು ಮರೆತು ನಡುವಿನಲ್ಲಿ 'ವಚನವೆಂತಹ ಕಾವ್ಯ' ಎನ್ನುವ ವಾದವು ತಲೆಯೆತ್ತಿ ಮುಂದುವರೆದ ದಿನ ವ..ಗಿಯಿತು. ಸ್ವಾಮಿ ವಿವೇಕಾನಂದರ ಲೇಖನಗಳು, ಪತ್ರಗಳು; ಗದ್ಯಗಲ್ಲಿನ ಕಾವ್ಯಪ್ರತಿಭೆಯನ್ನು ವಾಕ್ಪ್ರಮಾನವಾಗಿ ಬೆಳಗುತ್ತಿರುವ ಭಗವದ್ಗೀತೆ ಅರಳಿದ ಹೂಗಳಿಂದಾದ ಕಾವ್ಯವೇ. ಉಪನಿಷದ್ರಮ್ಯವಾಣಿ ಕವಿತೆಯೆ. ಆಂಗ್ಲದಲ್ಲಿನ ಬನಿಯನ್ನನ 'ಪಿಲ್‌ಗ್ರಿಮ್ಸ್ ಪ್ರೋಗ್ರೆಸ್' ತತ್ತ್ವಾನ್ವೇಷಣಗ್ರಂಥವೇ. ವಿಶ್ವಕವಿ ರವೀಂದ್ರರು ಕವಿಯಾದರೂ ತಾತ್ತ್ವಿಕರೆಂಬುದು ನಾವು ತಿಳಿದ ಅಂಶವೇ. ಸರ್ವಪಲ್ಲಿ ರಾಧಾಕೃಷ್ಣನ್ ಪಂಡಿತರೂ ತಾತ್ತ್ವಿಕರೂ ಆದ ಕವಿಯೇ. ಕವಿತೆಗೂ ತತ್ತ್ವಚಿಂತನೆಗೂ ಇರುವ ಸಂಬಂಧ ಇಂತಹದು. ಚಲಂ ಅವರ ಮಹಾಕಾವ್ಯ 'ಸುಧ' ಆತ್ಮನಿವೇದನೆ, ತತ್ತ್ವಸಾಧನೆ ಭಕ್ತಿ ನಿವೇದನೆಗಳ ತ್ರಿವೇಣಿ ಸಂಗಮ. ( ಕನ್ನಡದ ಕವಿಗಳಲ್ಲಿನ ವಚನಕಾರರು ಪುರಂದರ ದಾಸರು, ಕನಕದಾಸರಿಂದ ಈಚೆಗಿನ ರಸಕವಿ ಶ್ರೀಕುವೆಂಪು ಅವರುಗಳೆಲ್ಲ ತತ್ತ್ವಾನ್ವೇಷಕರೇ ಹೌದು. )

ವೈದಗ್ಧ್ಯವನ್ನು ಸಾರುತ್ತವೆ. ತತ್ತ್ವಶಾಸ್ತ್ರದವಿಷಯ ಜಟಿಲವಾದರೂ ವಿವೇಕಾನಂದರ ಭಾವಸ್ಪರ್ಶದಿಂದ ಕವಿತಾಮಯವಾಗಿದೆ. ಕವಿತೆಯಲ್ಲಿ ತತ್ತ್ವಜಿಜ್ಞಾಸೆ ಎಂತಹುದು ಎಂಬ ಪ್ರಶ್ನೆ ಉದಿಸಬಹುದು. ಭಾರತೀಯ ಕವಿಗಳಲ್ಲಿ ಹಲವಾರುಮಂದಿ ತಾತ್ತ್ವಿಕರೇ ಹೌದು.

ಭಾರತೀಯ ಸಂಸ್ಕೃತಿ ದರ್ಪಣವಾದ ಕೃಷ್ಣ ದ್ವೈಪಾಯನರು ಸ್ವಭಾವತಃ ತಾತ್ತ್ವಿಕರೇ. ಮಿಗಿಲಾಗಿ ಭಾರತೀಯ ಆಧ್ಯಾತ್ಮಿಕತೆಗೆ ಆತ ಕೇಂದ್ರಬಿಂದು. ಆತನಿಗೆ ಕವಿತೆ ಒಂದು ಉಪಕರಣ. ಆತ ಹೇಳಿದ್ದು ದಿವ್ಯಜೀವನ. ಹಿಂದಿಯಲ್ಲಿನ ಕಬೀರ ತಾತ್ತ್ವಿಕನಾದ ಕವಿ. ಜಯಶಂಕರ ಪ್ರಸಾದರ ಮಹಾಕಾವ್ಯ 'ಕಾಮಾಯನಿ' ತತ್ತ್ವಾನ್ವೇಷಣ ಸೌರಭಸಾರ. ಪ್ರಭೋಧ ಚಂದ್ರೋದಯ, ಸಂಕಲ್ಪ ಸೂರ್ಯೋದಯ, ಸಂಸ್ಕೃತ ಭಾಷೆಯ ತತ್ತ್ವ ಬೋಧಕ ನಾಟಕಗಳು. ಇಡೀ ಪ್ರಪಂಚದಲ್ಲೇ ದೇದೀ-

ವಿವೇಕಾನಂದರು ಪದ್ಯಗಳನ್ನು ಬರೆದದ್ದು ಕಡಮೆ, ಪರಿಮಾಣದಲ್ಲಿ ಮಾತ್ರ. ಕವಿತಾ ಪರಿಣಾಮ ಹೆಚ್ಚು. ಸಂಸ್ಕೃತದ ವ್ಯಾಸ, ಕಾಳಿದಾಸ, ಭವಭೂತಿ. ಶಂಕರಾಚಾರ್ಯರುಗಳೂ, ಬಂಗಾಲಿಯ ವೈಷ್ಣವ ಭಕ್ತರೂ, ಆಂಗ್ಲದ ವರ್ಡ್ಸ್‌ವರ್ತ್, ಡಿಕನ್ಸ್, ಬ್ರೌನಿಂಗ್, ವಾಲ್ಟ್ ವಿಟ್‌ಮನ್ ಅವರುಗಳ ಬಗ್ಗೆ ಅಭಿಮಾನ ಹೊಂದಿದ್ದರು. ಡಿಕನ್ಸನ ಪಿಕ್‌ವಿಕ್ ಪೇಪರ್ಸ್ ಅವರಿಗೆ ಕಂಠಗತ.

ಖಡ್ಗಮೃಗವನ್ನು ಪಾರಿವ್ರಾಜಕನ ಪ್ರತೀಕವಾಗಿ ಕಂಡು ಅವರು ತಿಳಿಸಿದ ಮುಕ್ತನ ಸ್ಥಿತಿಯನ್ನು ವಿವರಿಸುವ ಪದ್ಯವಿದು.

' Go forward without a path

**ಶ್ರೀಮೋನಾ**
( ತೆಲುಗಿ ನಿಂದ )

fearing nothing, caring for nothing
wander alone like the rhinoceros'
'Even as the lion not trembling at noises
Even as the wind, not caught in a net,
Even as the lotusleaf unstained by the water.
Do thou wander alone, like the rhinoceros'

ಸ್ವೇಚ್ಛಾಪ್ರವೃತ್ತಿ, ಬಂಧರಾಹಿತ್ಯ, ತ್ರಿಗುಣಾತೀತ ಸ್ಥಿತಿಗೆ ಮೇಲಿನ ಪದ್ಯ ಕವಿತಾರವಿಂದ. ಭಾವವಾದರೋ ಮಕರಂದಸದೃಶ ಧರ್ಮಪಥ ಭಾವಾಧಾರ.

ತ್ರೈಗುಣ್ಯವಿಷಯಾ ವೇದಾಃ
ನಿಸ್ತ್ರೈಗುಣ್ಯೋ ಭವಾರ್ಜುನ

–ಎಂಬುದು ಗೀತಾವಾಕ್ಯ. ಸೋದರಿ ನಿವೇದಿತಾಳನ್ನು ಆಶೀರ್ವಾದ ಮಾಡುತ್ತ ವಿವೇಕಾನಂದರು ಈ ರೀತಿ ಹೇಳಿದರು.

'The mother's heart, the hero's will
The sweetness of the southern breeze
'The sacred charm and strength that dwell
On Aryan altars, flaming free
All these be yours and many more
o ancient soul could dream before
Be thou to India's future son
The mistress, servant, friend in one'

ಮೇಲಿನ ಪದ್ಯದಲ್ಲಿ ಮುಪ್ಪುರಿಗೊಳ್ಳುವಿಕೆ ಪರಮಾರ್ಥಿಕತೆಗೆ ತುರಾಯಿ ಹಿಡಿದಂತಿದೆ.

ವಿವೇಕಾನಂದರ ಸಂಸ್ಕೃತ ಶೈಲಿಯುನ್ನೂ ಭಾವೋನ್ನತಿಯನ್ನು ಗಮನಿಸಿ.

ಅಖಂಡಾಚಲ ಪ್ರತಿಹತ ತಮೋ ಯಸ್ಯ
ಪ್ರೇಮಪ್ರವಾಹಃ
ಲೋಕಾತೀತೋऽಪ್ಯಹಹ ನ ಜಹೌ
ಲೋಕಕಲ್ಯಾಣಮಾರ್ಗಮ್,
ತ್ರೈಲೋಕ್ಯೇऽಪ್ಯಪ್ರತಿಮಮಹಿಮಾ
ಜಾನಕೀ ಪ್ರಾಣಬಂಧೋ
ಭಕ್ತ್ಯಾಜ್ಞಾನಂ ವೃತವರವಪು
ಸೀತಯಾಯೋಹಿರಾಮ

ಶ್ರೀರಾಮಕೃಷ್ಣ ಪರಮಹಂಸರನ್ನು ಕುರಿತದ್ದು, 'ಪಬಯೋರಬೇಧ', ಗಮನಾರ್ಹ. ಶೈಲಿಯಲ್ಲಿ ಭವಭೂತಿಯ ರೀತಿಯನ್ನು ಹೊಂದಿದೆ.

'The whole life is a swan-song'

ಎಂದು ಭಾವಿಸಿದ ಮಹಾಯೋಗಿಜ್ಞಾನಿ ಆತ.

ನ ಪ್ರಜಯಾ ನ ಧನೇನ ಚ, ತ್ಯಾಗೇನೈಕೇ
ಅಮೃತತ್ತ್ವಮಾನಶುಃ

–ಎಂದು ತ್ರಿಕರಣ ಶುದ್ಧಿಯಾಗಿ ತಿಳಿದು ಆಚರಿಸಿದ ಮಹಾತ್ಯಾಗಿ ಮಹಾಕವಿ ಆತ. ಆತನ ರಚನೆಗಳನ್ನು ಪಠಿಸುವವರು ಚರಿತಾರ್ಥರು. ಕವಿ ಕುಲಗುರು ಕಾಳಿದಾಸನೆಂದಂತೆ 'ಚರಿತಾರ್ಥೈನ ಭಾರತಿ'

---

# ಆರ್ಜಿತ ತೆಪ್ಪ ಉತ್ಸವ

ಸಾಧಾರಣವಾಗಿ ವರುಷಕ್ಕೊಂದು ಬಾರಿ 3 ದಿನಗಳ ಪರ್ಯಂತ ನಡೆಯುವ ಪ್ಲವೋತ್ಸವವಲ್ಲದೆ, ಭಕ್ತಜನರ ಸೌಕರ್ಯಕ್ಕಾಗಿ ದೇವಸ್ಥಾನದವರಿಂದ ಏರ್ಪಡಿಸಲ್ಪಟ್ಟ ಆರ್ಜಿತೋತ್ಸವ, ಈ ಪ್ಲವೋತ್ಸವ.

ಪ್ರತಿ ಮಂಗಳವಾರದಲ್ಲಿ, ಆರ್ಜಿತಸೇವೆಗಳನಂತರ, ಮಲಯಪ್ಪಸ್ವಾಮಿಯವರನ್ನು ದೇವೇರಿಗಳನ್ನು ಅಲಂಕರಿಸಿ, ಮಂಗಳ ವಾದ್ಯನಾದ, ವೇದಪ್ರಬಂಧ ಪಠನಾದಿಗಳ ನಡುವೆ ಅವರನ್ನು ಅಲಂಕೃತವಾದ ತೆಪ್ಪದ ಮೇಲೆ ಕುಳ್ಳಿರಿಸಿ, ಸ್ವಾಮಿ ಪುಷ್ಕರಿಣಿಯಲ್ಲಿ 3 ಪರ್ಯಾಯ ವಿಹಾರಯಾತ್ರೆ ಮಾಡಿಸುತ್ತಾರೆ.

ಈ ಮೂರು ಪ್ರದಕ್ಷಿಣೆಗಳ ಅನಂತರ ನಿವೇದನ; ಮಂಗಳ ನೀರಾಜನ ನಡೆಗು ಸ್ವಾಮಿಯುವರು ದೇವೇರಿಗಳು ವಿವಿಧ ಮರ್ಯಾದೆಗಳೊಡನೆ ಆಲಯ ಪ್ರವೇಶ ಮಾಡುತ್ತಾರೆ.

ರೂ. 2500 ಸಲ್ಲಿಸಿದ ಗೃಹಸ್ಥರು ಈ ಸೇವೆ ಮಾಡಿಸಿ, ಸ್ವಾಮಿಯವರ ಪುಷ್ಕರಿಣೀ ವಿಹಾರವನ್ನು ಮೆಟ್ಟಲ ಮೇಲಿದ್ದು ನೋಡಬಹುದು. ಗೃಹಸ್ಥರಿಗೆ ವಸ್ತ್ರ ಬಹುಮಾನ, ಪ್ರಸಾದವಿನಿಯೋಗಗಳಲ್ಲದೆ, ಸ್ವಾಮಿಯವರ ಆಕೃತಿವುಳ್ಳ 5 ಗ್ರಾಂ ತೂಕದ ಬಂಗಾರದ ಪದಕ ಕೊಡಲ್ಪಡುತ್ತದೆ, ಅವರಿಗೆ ಸಂಬಂಧಿಸಿದ 10 ಜನರನ್ನು ದರ್ಶನಕ್ಕೆ ಅನುಮತಿಸಲಾಗುತ್ತದೆ.

ತಿರುಮಲೆ ತಿರುಪತಿ ದೇವಸ್ಥಾನ.

# ಹರಿದಾಸ ವಾಣಿ

# ಶ್ರೀ ಪುರಂದರದಾಸರು

ಗಾಯನ ಕಲೆಗೆ ಪುಷ್ಯಮಾಸವು ಪವಿತ್ರ ಹಾಗೂ ಪ್ರಾಮುಖ್ಯತೆಯನ್ನು ಪಡೆದಿದೆ. ಮಾರ್ಗಶಿರ ಮಾಸ ಮೊದಲುಗೊಂಡು ಕಾರ್ತಿಕ ಮಾಸದ ವರೆಗಿನ ಹನ್ನೆರಡು ತಿಂಗಳುಗಳು ಕೇಶವಾದಿ ಹನ್ನೆರಡು ವಿಷ್ಣು ರೂಪಗಳಿರುವುದಾಗಿ ಸಂಕಲ್ಪವಿದೆ. 'ಪೌಷ್ಯ ನಾರಾಯಣಾತ್ಮಕ' ಎಂದು ಸಂಕಲ್ಪವೇ ಇದೆ.

'ನಾರಾಯಣ' ಎಂಬ ಶಬ್ದಕ್ಕೆ "ಶಬ್ದಗಮ್ಯ" ಎಂದು ಅರ್ಥ. ಆದುದರಿಂದ ನಾರಾಯಣ ಎಂದರೆ ನಾದೋಪಾಸಕ ಎಂದೂ ಅರ್ಥವಾಗುತ್ತದೆ. ಈ ನಾದವೇ ಗಾಯನ ಕಲೆಯಾಗಿ ಪರಿಣಮಿಸಿದೆ.

ಪ್ರಸ್ತುತ ಕರ್ನಾಟಕ ಸಂಗೀತವೆಂಬ ಹೆಸರಿನಿಂದ ಹಾಡುತ್ತಿರುವುದನ್ನು ಶುದ್ಧ ಭಾರತೀಯ ಗಾಯನಪದ್ಧತಿಯನ್ನಾಗಿ ಪರಿವರ್ತಿಸಿದ ಸಂಗೀತ ಪಿತಾಮಹರೂ, ಆದಿ ಗುರುಗಳೂ ಆದ ಶ್ರೀ ಪುರಂದರದಾಸರ ಪುಣ್ಯದಿನವು ತಾ॥ 12–2–83 ನೇ ದಿನ ಅಂದರೆ ಪುಷ್ಯ ಬಹುಳ ಅಮಾವಾಸ್ಯೆಯ ದಿನ ಬರುತ್ತದೆ.

ಕರ್ನಾಟಕ ಸಂಗೀತವನ್ನು ವಿಶೇಷವಾಗಿ ಅಭಿವೃದ್ಧಿ ಪಡಿಸಿದ ಶ್ರೀ ತ್ಯಾಗರಾಜರು ತಾವು ರಚಿಸಿದ "ಪ್ರಹ್ಲಾದ ವಿಜಯ" ಎಂಬ ಸಂಗೀತ ಗೇಯ ನಾಟಕದಲ್ಲಿ 'ದುರಿತವ್ರಾತಮುಲೆಲ್ಲನು ಬರಿಮಾರ್ಚಿಡಿ ಹರಿಗುಣಮುಲು ಬಾಡುಚುನೆಪುಡುನ್. ಪರವಶುಡೈನೆಲಯು ಶ್ರೀ ಪುರಂದರದಾಸುನಿ ಮಹಿಮಲನು ದಲಚೆದ ಮದಿಲೋನಿನ್" ಎಂದು ಶ್ರೀ ಪುರಂದರದಾಸರನ್ನು ಸ್ಮರಿಸಿದ್ದಾರೆ. ಸಾಲದೆ, ಸಂಗೀತ ಪಿತಾಮಹ, ಆದಿಗುರು, ಮಹಿಮಾನ್ವಿತರು ಎಂದೂ, ತಮಗೆ ಎಲ್ಲಾ ವಿಷಯಗಳಲ್ಲಿಯೂ ಮಾರ್ಗ ದರ್ಶಕರು, ಆದರ್ಶ ಪುರುಷರು, ಅಂಥ ಮಹಾನುಭಾವರಾದ ದಾಸರ ಚರಿತ್ರೆಯ ಸ್ಮರಣೆಯು ಪುಣ್ಯಪ್ರದ ಹಾಗೂ ಜ್ಞಾನದಾಯಕ ಎಂದೂ ಹೇಳಿಕೊಂಡಿದ್ದಾರೆ.

16 ನೇ ಶತಮಾನದಲ್ಲಿ ಮಹಾರಾಷ್ಟ್ರದ ಪುರಂದರ ಗಢ ಎಂಬ ಗ್ರಾಮದಲ್ಲಿ ವರದಪ್ಪನಾಯಕ ಎಂಬ ಬ್ರಾಹ್ಮಣರು ಇದ್ದರು. ಇವರು ಕೋಟ್ಯಾಧೀಶ್ವರರು. ವಜ್ರಗಳ ವ್ಯಾಪಾರವುತ್ತು ಬಡ್ಡಿ ವ್ಯಾಪಾರ ಮಾಡುತ್ತಿದ್ದರು. ಇವರಿಗೆ ಆ

ವಿದ್ವಾನ್ ಜಿ. ತಿಮ್ಮಪ್ಪಯ್ಯ

ಕಾಲದಲ್ಲಿ ನಾಯಕ್ ಎಂಬ ಬಿರುದು. ಆದುದರಿಂದ ಇವರನ್ನು ಜನರು ವರದಪ್ಪನಾಯಕನೆಂದು ಕರೆಯುತ್ತಿದ್ದರು. ಕಮಲಾಬಾಯಿ ಎಂಬುವವರು ಇವರ ಧರ್ಮಪತ್ನಿ.

ಪ್ರಪಂಚದಲ್ಲಿ ಪ್ರತಿಯೊಬ್ಬ ಮಾನವನಿಗೂ ಯಾವುದೋ ಒಂದು ಚಿಂತೆ ಇರುತ್ತದೆ. ಅದರಂತೆ ವರದಪ್ಪನಾಯಕರಿಗೆ ಸಂತಾನವಿಲ್ಲಗ ಚಿಂತೆ. ಆ ದಂಪತಿಗಳು ತಿರುಪತಿಗೆ ಹೋಗಿ ಅಲ್ಲಿ ಶ್ರೀ ವೆಂಕಟೇಶ್ವರ ಸ್ವಾಮಿಯ ಸೇವೆಯನ್ನು 3 ತಿಂಗಳ ಕಾಲ ಮಾಡಲು ಒಂದು ದಿನ ಸ್ವಪ್ನದಲ್ಲಿ ದರ್ಶನವಾಗಿ 'ನನ್ನ ಆದೇಶದಂತೆ ನಾರದರು ನಿಮ್ಮ ಗರ್ಭದಲ್ಲಿ ಜನಿಸುತ್ತಾರೆ'ಂದು ಹೇಳಲಾಗಿ ನಾಯಕನು ಪತ್ನೀ ಸಮೇತ ಊರಿಗೆ ಬಂದು ಸೇರಿದರು.

ಅನಂತರ ಆ ದಂಪತಿಗಳು ತಮ್ಮ ಮನೆಯಲ್ಲಿ ಪ್ರತಿ ನಿತ್ಯವೂ ಶ್ರೀನಿವಾಸನನ್ನು ಪೂಜಿಸಿ ಆತನ ಪ್ರೀತ್ಯರ್ಥವಾಗಿ ದಾನ ಧರ್ಮಾದಿಗಳನ್ನು ಅನ್ನ ಸಂತರ್ಪಣೆಗಳನ್ನು ಮಾಡುತ್ತಿದ್ದರು. ಕಾಲಕ್ರಮೇಣ ಕಮಲಾಬಾಯಿಯವರು ಗರ್ಭವತಿಯಾಗಿ ಕ್ರಿ॥ ಶ॥ 1484 ನೇ ಸಂವತ್ಸರದಲ್ಲಿ ಒಂದು ಗಂಡು ಮಗುವನ್ನು ಹಡೆದರು. ನಾಯಕ ದಂಪತಿಗಳು ತುಂಬಾ ಆನಂದ ಭರಿತರಾಗಿ ಶ್ರೀನಿವಾಸನ ವರದಿಂದ ಜನಿಸಿದ ಮಗುವಿಗೆ ಶ್ರೀನಿವಾಸ ಎಂದೇ ನಾಮಕರಣ ಮಾಡಿದರು. ಬಂಧುಗಳು ಆಪ್ತರು, ನೆರೆಹೊರೆಯವರು ಈ ಮಗುವನ್ನು ಶೀನಪ್ಪನಾಯಕ, ಶೀನಪ್ಪ, ತಿರುಮಲೆಯಪ್ಪ ಮತ್ತು ತಿಮ್ಮಪ್ಪ ಎಂದೂ ಕರೆಯುತ್ತಿದ್ದರು.

ಅಖಂಡ ಐಶ್ವರ್ಯವಂತರಮನೆಯಲ್ಲಿ ಜನಿಸಿದ ಈ ಮಗು ಯಾವ ವಿಧ ಕೊರತೆಗಳಿಲ್ಲದೆ, ತಂದೆ ತಾಯಿಗಳ ಬಂಧು ಮಿತ್ರರ, ಅಪಾರ ಪ್ರೇಮ ವಾತ್ಸಲ್ಯಗಳಿಂದ ಬೆಳೆಯಿತು. ನಾರದಾಂಶಸಂಭೂತವಾಗಿ ಜನಿಸಿದ ಶಿಶು ಶುಕ್ಲಪಕ್ಷದ ಚಂದ್ರನೋಪಾದಿಯಲ್ಲಿ ತಂದೆ ತಾಯಿಗಳಿಗೆ ಆನಂದದಾಯಕವಾಗಿ ಬೆಳೆಯಿತು.

ಉಪನಯನಾದಿಗಳ ವಯಸ್ಸು ಬರುತ್ತಲೇ ಶೀನಪ್ಪ ನಾಯಕರಿಗೆ ಉಪನಯನ ಮಾಡಿದ ವರದಪ್ಪ ನಾಯಕರು, ವಿದ್ಯಾಭ್ಯಾಸಕ್ಕಾಗಿ ಅಗಿನ ಕಾಲದ ಶ್ರೇಷ್ಠ ಪಂಡಿತರಲ್ಲಿ ಕಳುಹಿಸಿದರು. ಗುರುಕುಲವಾಸ ಕಾಲದಲ್ಲಿ ಶ್ರೀನಿವಾಸನು ಸಂಸ್ಕೃತ, ಕನ್ನಡ, ಮಹಾರಾಷ್ಟ್ರ ಭಾಷೆಗಳಲ್ಲಿಯೂ, ವೇದ ಉಪನಿಷತ್ತು, ಪುರಾಣಗಳಲ್ಲಿಯೂ ಹಾಗೂ ಸಂಗೀತ ಲಕ್ಷ್ಯ ಲಕ್ಷಣಗಳಲ್ಲಿಯೂ ವಿಶೇಷವಾದ ಪಾಂಡಿತ್ಯವನ್ನು ಸಂಪಾದಿಸಿದ.

ಶ್ರೀನಿವಾಸ ನಾಯಕನ 16 ನೆಯ ವಯಸ್ಸಿನಲ್ಲಿ ಸರಸ್ವತೀಬಾಯಿ ಎಂಬ ಕನ್ಯೆಯೊಡನೆ ವಿವಾಹವಾಯಿತು. ಸತ್ಕುಲ ಪ್ರಸೂತೆಯೂ, ಸತ್ ಚಾರಿತ್ರ್ಯವುಳ್ಳ ಪತ್ನಿಯೊಡನೆ ಗೃಹಸ್ಥಾಶ್ರಮದಲ್ಲಿ ಸಂತೋಷದಿಂದ ಇರಲಾಗಿ ತಂದೆ ತಾಯಿಗಳು ಇವನ 19 ನೆಯ ವಯಸ್ಸಿನಲ್ಲಿಯೇ ಸ್ವರ್ಗಸ್ಥರಾದರು. ವಂಶಪಾರಂಪರ್ಯವಾದ ವೃತ್ತಿಯನ್ನೇ ತಾನೂ ಅನುಸರಿಸಿ ವಜ್ರ ವ್ಯಾಪಾರವನ್ನು ಮಾಡುತ್ತಿದ್ದ. ವಜ್ರ ಪರೀಕ್ಷೆಯಲ್ಲಿ ಅದ್ವಿತೀಯವಾದ ನಿಪುಣತೆಯನ್ನೂ, ವ್ಯಾಪಾರದಲ್ಲಿ ಚತುರತೆಯನ್ನೂ ಹೊಂದಿದ ಶ್ರೀನಿವಾಸನಾಯ



ಕನು ವ್ಯಾಪಾರದಲ್ಲಿ ತನ್ನ ತಂದೆಯವರಿಗಿಂತ ಹೆಚ್ಚಾಗಿ ಹಣಗಳಿಸಿ ಒಂಬತ್ತು ಕೋಟಿ ಬಂಗಾರದ ನಾಣ್ಯಗಳನ್ನು ಮೂಲಧನವನ್ನಾಗಿ ಮಾಡಿ 'ನವಕೋಟಿ ನಾರಾಯಣ' ಎಂಬ ಬಿರುದನ್ನು ಪಡೆದ.

ಸಂಪ್ರದಾಯದ ಪ್ರಕಾರ ತ್ರಿಕಾಲ ಸಂಧ್ಯಾವಂದನೆ, ಸಾಲಿಗ್ರಾಮ ದೇವತಾರ್ಚನೆಗಳನ್ನು ಎಂದೂ ಬಿಟ್ಟವನಲ್ಲ. ದೇವತಾರ್ಚನೆ ಮುಗಿದ ಮೇಲೆ ದೇವರ ಮುಂದೆ ಕುಳಿತು ಸಂಗೀತ ಸಾಧನೆಯನ್ನು ಶ್ರೀನಿವಾಸನಾಯಕ ಮಾಡುತ್ತಿದ್ದ.

ಆದರೆ ವ್ಯಾಪಾರವು ಹೆಚ್ಚಿದಂತೆಲ್ಲಾ ಐಶ್ವರ್ಯ ಅಭಿವೃದ್ಧಿಯಾಗಿ ನಾಯಕನಿಗೆ ಲುಬ್ಧತ್ವವುಂಟಾಗಿ ಜಿಪುಣಾಗ್ರೇಸರ ಚಕ್ರವರ್ತಿಯಾದ. ದಾನಧರ್ಮಾದಿಗಳನ್ನು ಮಾಡುತ್ತಿರಲಿಲ್ಲ, ಅತಿಥಿ ಅಭ್ಯಾಗತರಿಗೆ ಸ್ವಾಗತ ಇಲ್ಲ, ಹೆಂಡತಿಯಲ್ಲಿ ನಂಬಿಕೆಯಿಲ್ಲದವನಾಗಿ ಆ ಹೊತ್ತಿಗಷ್ಟು ಭೋಜನ ಸಾಮಾಗ್ರಿ ಅಳೆದು ಸಹ ಕೊಡುವ ಮಟ್ಟದ ಲೋಭಿಯಾದ.

ಸರಸ್ವತೀಬಾಯಿ ರೂಪಕ್ಕೆ ತಕ್ಕಂತ ಸೌಶೀಲ್ಯ, ಹರಿಭಕ್ತಿ, ಧರ್ಮ ಚಿಂತನೆಗಳಿಂದ ಕೂಡಿದ ಸಾಧ್ವೀಮಣಿ. ಪತಿಗೆ ಉಂಟಾಗಿರುವ ಧನ ವ್ಯಾಮೋಹ, ಲುಬ್ಧತ್ವಗಳನ್ನು ಹೋಗಲಾಡಿಸಿ ಧರ್ಮ ಗುಣ ದೈವ ಭಕ್ತಿಯನ್ನು ಪತಿಗೆ ದಯಪಾಲಿಸುವಂತೆ ಸದಾ ಶ್ರೀಹರಿಯನ್ನು ಬೇಡುತ್ತಿದ್ದಳು.

ಹೀಗಿರುವಲ್ಲಿ ಶ್ರೀನಿವಾಸನಾಯಕನ 37 ರಿಂದ 40ನೆ ವಯಸ್ಸಿನ ಒಳಗೆ (ಕ್ರಿ. ಶ. 1524 ರ ಮಧ್ಯಕಾಲ) ಒಂದುದಿನ ಒಬ್ಬ ಬ್ರಾಹ್ಮಣನು ನಾಯಕನ ಅಂಗಡಿಗೆ ಬಂದು ತನ್ನ ಮಗನಿಗೆ ಉಪನಯನ ಮಾಡಬೇಕೆಂದೂ, ಅದಕ್ಕಾಗಿ ಏನಾದರೂ ದ್ರವ್ಯ ಸಹಾಯ ಮಾಡಬೇಕೆಂದೂ ಯಾಚಿಸಿದ.

ನಾಯಕ ಈಗ ವೇಳೆಯಿಲ್ಲ ನಾಳೆ ಬರುವಂತೆ ಯಾವುದೋ ಯೋಚನೆಯಲ್ಲಿ ಹೇಳಿದನು, ಇವನ ಯೋಚನೆಯೆಂದರೆ ನಾಳೆ ಈ ಬ್ರಾಹ್ಮಣ ಬರಲಾರ ಎಂಬುದೇ ಊಹೆ. ಆದರೆ ಮಾರನೆಯ ದಿನ ಬ್ರಾಹ್ಮಣ ಬರಲಾಗಿ ತಪ್ಪಿಸಿಕೊಳ್ಳಲು ಮಾರ್ಗವಿಲ್ಲದೆ ಆಗಲೂ ಸಹ ನಾಳೆಬರುವಂತೆ ಹೇಳಿದ. ಈ ರೀತಿ ಬ್ರಾಹ್ಮಣ ಬರುವುದು, ನಾಯಕನು ಕೊಡದೆ ಬರಿಗೈಯಲ್ಲಿ ಬ್ರಾಹ್ಮಣನನ್ನು ಕಳಿಸುವುದು, ಹೀಗೆ ಎಷ್ಟೋ ದಿನ ನಡೆಯಿತು. ಬ್ರಾಹ್ಮಣ ಬಿಡ, ಇವನು ಕೊಡ ಎಂಬಂತಾಯಿತು.

ಇತ್ತ ಬ್ರಾಹ್ಮಣ ನಾಯಕರ ಮನೆಗೆ ಹೋಗಿ ಆತನ ಹೆಂಡತಿ ಸರಸ್ವತೀ ಬಾಯಿಯಲ್ಲಿ ಯಾಚಿಸಲಾಗಿ ಆಕೆ 'ನನ್ನದು ಎಂಬುದು ಈ ಮನೆಯಲ್ಲಿ ಯಾವುದೂ ಇಲ್ಲವೆಂದೂ, ಎಲ್ಲ ತನ್ನ ಗಂಡನದೆಂದೂ ಆತನ ಅನುಮತಿಯಿಲ್ಲದೆ ತಾನೇನೂ ಕೊಡಲಾರೆನೆಂದು' ತಿಳಿಸಿದಳು. ಆಗ ಆ ಕಪಟ ಬ್ರಾಹ್ಮಣನು 'ಕಷ್ಟವು ವೈಯುಕ್ತಿಕವೆಂದೂ, ಒಬ್ಬರು ಮಾಡಿದ್ದರ ಫಲ ಮತ್ತೊಬ್ಬರಿಗೆ ಬಾರದೆಂದೂ, ಸತ್ಕರ್ಮಗಳನ್ನು ಮಾಡ ಬೇಕಾದರೆ ಬೇರೆಯವರ ಅನುಮತಿ ಅನಾವಶ್ಯಕವೆಂದೂ, ದಾನಮಾಡಲು ಮನಸ್ಸಿದ್ದರೆ ನಿನ್ನ ತಂದೆಯು ಕೊಟ್ಟಿರುವ ನಿನ್ನ ಮೂಗಿನಲ್ಲಿರುವ ಮೂಗುತಿಯನ್ನು ಕೊಡಬಹುದೆಂದೂ' ಸೂಚಿಸಿದನು.

ಆಗ ಆ ಸೂಕ್ಷ್ಮಮತಿಯಾದ ನಾರಿಮಣಿ ಸರಸ್ವತೀಬಾಯಿಯೂ ಹೀಗೆ ಯೋಚಿಸಿದಳು 'ಈ ಬ್ರಾಹ್ಮಣ ಹೀಗೆ ಒಳಗೆ ಬಂದ. ಅದೂ ಮನೆಯಲ್ಲಿ ನಾಯಕರಿಲ್ಲದ ಸಮಯದಲ್ಲಿ. ಮೂಗುತಿ ನನ್ನ ತಂದೆ ಕೊಟ್ಟದೆಂದೂ ಈ ಬ್ರಾಹ್ಮಣನಿಗೆ ಹೇಗೆ ಗೊತ್ತು. ಇದೆಲ್ಲಾ ಏನೋ ಮಾಯವಾಗಿದೆಯೆಂದೂ ಭಗವಂತನಾದ ಶ್ರೀಹರಿಯು ನನ್ನನ್ನೇನಾದರೂ ಪರೀಕ್ಷಿಸಲು ಬಂದಿರಬಹುದೇ?' ಈರೀತಿ ನಾನಾಪರಿ ಯೋಚಿಸಿ ಕಡೆಗೆ ದಾನ ಮಾಡುವ ಮನಸ್ಸು ಉಂಟಾಗಿ ಮೂಗುತಿಯನ್ನು ತೆಗೆದು ಪರಮ ಭಕ್ತಿಯಿಂದ 'ಕೃಷ್ಣಾರ್ಪಣಮಸ್ತು' ಎಂದು ಬ್ರಾಹ್ಮಣನಿಗೆ ದಾನಮಾಡಿ 'ಇದನ್ನು ಎಲ್ಲಿಯಾದರೂ ಮಾರಿ ಬಂದ ಹಣದಿಂದ ಉಪನಯನ ಮಾಡಿಕೊಳ್ಳಿ' ಎಂದು ಹೇಳಿ ಕಳುಹಿಸಿದಳು.

ಆ ಬ್ರಾಹ್ಮಣ ಅತ್ಯ ಮೂಲ್ಯವಾದ ಅಧಿಕ ಬೆಲೆ ಬಾಳುವ ಮೂಗುತಿಯನ್ನು ಶ್ರೀನಿವಾಸ ನಾಯಕನ ಅಂಗಡಿಗೆ ತೆಗೆದುಕೊಂಡು ಹೋದ. ನಾಯಕ ಈತ ಬರುತ್ತಿದ್ದುದನ್ನು ಕಂಡು ಏನು ಹೇಳಬೇಕೆಂದು ಯೋಚಿಸುತ್ತಿರಲಾಗಿ ಬ್ರಾಹ್ಮಣ 'ಈ ಮೂಗುತಿಯನ್ನು ಬೆಲೆಗೆ ತೆಗೆದುಕೊಳ್ಳುತ್ತೀರಾ' ಎಂದು ಕೇಳಿ ಮೂಗುತಿಯನ್ನು ನಾಯಕನ ಕೈಗೆ ಕೊಟ್ಟನು. ಮೂಗುತಿಯನ್ನು ಕಂಡು ಹೌಹಾರಿ 'ಇದನ್ನು ಯಾರು ಕೊಟ್ಟರು'?. 'ಒಬ್ಬ ಭಕ್ತಳು ಕೊಟ್ಟಿದ್ದಾಳೆ.ತೆಗೆದುಕೊಳ್ಳಲು ಸಾಧ್ಯವೆ? ಎಲ್ಲರೂ ನಿನ್ನಂತೆಯೇ ಇರುವುದಿಲ್ಲ' – ಎಂದು ಮೂದಲಿಸಿ ಮಾತನಾಡಿದನು.

"ಇದು ಬಹಳ ಬೆಲೆ ಬಾಳುವುದು. ಇದರ ಬೆಲೆಯನ್ನು ನಿರ್ಣಯಿಸಲು ಕಾಲ ಬೇಕು, ನಾಳೆ ಬಂದರೆ ಹಣ ಕೊಡುತ್ತೇನೆ" ಎಂದು ನಾಯಕನು ಹೇಳಿದನು. 'ಹಾಗೆ ಆಗಲಿ ನಾಳೆ ಬರುವೆ ನಿನ್ನಲ್ಲಿ ನನಗೆ ನಂಬಿಕೆ ಇದೆ'–ಎಂದು ಹೊರಟು ಹೋದ ಬ್ರಾಹ್ಮಣ. ಕೂಡಲೇ ನಾಯಕನು ಮೂಗುತಿಯನ್ನು ಒಂದು ಭರಣಿಯಲ್ಲಿ ಹಾಕಿ ಕಬ್ಬಿಣದ ಪೆಟ್ಟಿಗೆಯಲ್ಲಿ ಬೀಗಮುದ್ರೆಯನ್ನು ಹಾಕಿ ಕಾವಲಿನವರಿಗೆ ಹೇಳಬೇಕಾದ್ದನ್ನು ಹೇಳಿ ಮನೆಗೆ ಹೊರಟ.

ಸರಸ್ವತೀಬಾಯಿ ಮೂಗುತಿ ದಾನಮಾಡಿದ ಮೇಲೆ ಯೋಚನೆಗಳಿಗೆ ಪ್ರಾರಂಭವಾಯಿತು. 'ಪತಿ ಬಂದರೆ ಮೂಗುತಿಯನ್ನು ಕಂಡು ಗುರ್ತಿಸುತ್ತಾರೆ. ಆಗ ಏನು ಹೇಳುವುದು. ಅತಿ ಶ್ರೇಷ್ಠವಾದ ಮೂಗುತಿ–ಅದನ್ನು ನಾಯಕರ ವಿನಃ ಮತ್ತಾರಿಗೂ ಕೊಳ್ಳಲು ಶಕ್ತಿಯಿಲ್ಲ. ಬ್ರಾಹ್ಮಣ ಮಾರಲು ಅಲ್ಲಿಗೆ ಹೋಗಿದ್ದರೆ? ದೇವರೇ ನೀನೇ ಕಾಪಾಡಬೇಕೆಂದು, ಹಲವು ಬಗೆಯ ಆಲೋಚನಾ ತರಂಗಗಳಲ್ಲಿ ಮುಳುಗಿರಲು ಅದೇ ವೇಳೆಯಲ್ಲಿ (ಅಕಾಲದಲ್ಲಿ) ನಾಯಕನು ಮನೆಗೆ ಆಗಮಿಸಿದನು. ಬಂದವನೇ ಸೇವಕರನ್ನು ತಾನಿಲ್ಲದ ವೇಳೆಯಲ್ಲಿ ಮನೆಗೆ ಯಾರಾದರೂ ಹೊಸಬರಾಗಲಿ ಬ್ರಾಹ್ಮಣರಾಗಲಿ ಬಂದಿದ್ದರೇ ಎಂದು ಕೇಳಿದನು. ಸೇವಕರು ಬ್ರಾಹ್ಮಣ ಬಂದಿದ್ದನ್ನು ಕಂಡಿಲ್ಲವಾದ್ದರಿಂದ ಯಾರೂ ಬಂದಿಲ್ಲವೆಂದು ಸ್ವಾಭಾವಿಕವಾಗಿ ಹೇಳಿದರು.

ಪತ್ನಿಯನ್ನು ಕರೆಯಲಾಗಿ ಮೂಗಿನಲ್ಲಿ ಬೇರೆ ಮೂಗುತಿಯನ್ನು ಕಂಡು ಅನುಮಾನದಿಂದಲೂ ಕೋಪದಿಂದಲೂ 'ಆ ನಿನ್ನ ಮೂಗುತಿಯಲ್ಲಿ' ಎಂದು ಕೇಳಿದ. ದಿಕ್ಕುತೋಚದವಳಾಗಿ ತೆಗೆದು ಪೆಟ್ಟಿಗೆಯಲ್ಲಿಟ್ಟಿದ್ದೇನೆ ಎಂದು ಹೇಳುತ್ತಾಳೆ. ಕೂಡಲೇ ಅದನ್ನು ತಂದು ತೋರಿಸುವಂತೆ ಆಜ್ಞಾಪಿಸುತ್ತಾನೆ. ಸರಸ್ವತೀಬಾಯಿಗೆ ಎಲ್ಲವೂ ಅರ್ಥವಾಯಿತು. ತರುವೆನೆಂದು ದೇವರಮನೆಗೆ ಹೋಗಿ ಪೂರ್ವ ಸಿದ್ಧತೆಯಂತೆ ಭಗವಂತನಲ್ಲಿ ಶರಣು ಹೊಗಿ 'ದೇವಾ ನಾನು ಮಾಡಿದ ಒಳ್ಳೆಯ ಕರ್ಮಕ್ಕೆ ತಕ್ಕ ಫಲ ಕೊಟ್ಟೆಯಾ' ಎಂದು ವಿಷವನ್ನು ಬಟ್ಟಲಿನಲ್ಲಿ ಹಾಕಿ ಕುಡಿಯಲು ಮೇಲಕ್ಕೆ

( 24ನೇ ಪುಟ ನೋಡಿ )

# ಪಂಪಾ ವಿರೂಪಾಕ್ಷ ದೇವಾಲಯ

ಶ್ರೀ ಕೆ. ವಾದಿರಾಜ

"ಹಂಪೆ ನೋಡುವುದಕ್ಕಿಂತಲು ಕೊಂಪೆಯಲ್ಲಿರುವುದು ಮೇಲು" ಎಂಬರ್ಥದ ಗಾದೆ ಕನ್ನಡದಲ್ಲಿದೆ. ಬಳ್ಳಾರಿ ಜಿಲ್ಲೆಯ ಹೊಸಪೇಟೆಯ ಕಂಪಲಾಪುರದಲ್ಲಿರುವ, ಪ್ರಾಕ್ತನ ವಸ್ತು ಪ್ರದರ್ಶನ ಶಾಲೆಯನ್ನು ದಾಟಿ ಮುಂದೆ ಹೋದೆಂತೆಲ್ಲಾ ಬಣ ಬಣ ಗುಟ್ಟುವ ಬಿಸಿಲಿನೊಡನೆ ಬೇಡವೆಂದರೂ ಕಣ್ಣಿಗೆ ಬೀಳುವ ಐತಿಹಾಸಿಕ ಅವಶೇಷಗಳು, ಕಾಲಿಗೆ ತೊಡರುವ ಜೀರ್ಣ ಶಿಲ್ಪಗಳು, ಇತಿಹಾಸದ ಪರಿವೆ ಇಲ್ಲದೆ ಕಲ್ಪನೆಯ ಕಣ್ಣಿಲ್ಲದೆ ನಡೆಯುವವರ ಮನಸ್ಸಿನಲ್ಲಿ 'ಮನೆಯಲ್ಲಿದ್ದಿದ್ದರೆ ಚೆನ್ನಾಗಿರುತ್ತಿತ್ತು' ಎಂಬ ಭಾವನೆಯುಂಟಾಗಿಸುವುದು ಸಹಜ. ರಾಣಿಯರ ಸ್ನಾನ ಗೃಹವಾಗಲಿ, ಸರಸ್ವತೀ ಮಂದಿರವಾಗಲಿ, ನವರಾತ್ರಿ ದಿಬ್ಬವಾಗಲಿ, ಹಜಾರ ರಾಮಸ್ವಾಮಿ ಗುಡಿ ಆಗಲಿ, ವಿಜಯ ವಿಠ್ಠಲಸ್ವಾಮಿ ಗುಡಿ ಆಗಲಿ, ಒಂದೇ ಎರಡೆ – ಕಣ್ಣು ನೋಡುವಷ್ಟು ದೂರ, ಕೈ, ಕಾಲು ಸೋಲುವಷ್ಟು ದೂರಕ್ಕೂ ಹಂಪೆಯ ಹಾಳು ಹೊಡೆದು ಕಾಣುತ್ತದೆ. ಹಂಪೆಯ ಒಳಕ್ಕೆ ಹೋದಂತೆಲ್ಲಾ ಈ ಐತಿಹಾಸಿಕ ಸ್ಮಾರಕಗಳ ಸಾಂದ್ರತೆ ಹೆಚ್ಚುತ್ತದೆ. ಗತ ಕಾಲದ ವೈಭವದ ಹೊಳಹುಗಳನ್ನು ವಿಸ್ತಾರಗೊಳಿಸುತ್ತದೆ. ಭಾವುಕ, ಪ್ರೇಕ್ಷಕರ ಮೈ, ಮನಗಳು ಆರ್ದ್ರಗೊಳ್ಳುತ್ತವೆ. ಇಂಥಲ್ಲಿ ಕಾಲವನ್ನು ಮೀರಿ ಕನಸಿನಿಂದ ನೆನಪಿಗೆ ತರುವ ಎರಡು ಸ್ಥಳಗಳೆಂದರೆ ಮೊದಲನೆಯದು 'ತುಂಗಭದ್ರೆ', ಎರಡನೆಯದು 'ವಿರೂಪಾಕ್ಷ ಸ್ವಾಮಿ' ದೇವಸ್ಥಾನ.

ಕಂಪಲಾಪುರದಿಂದ ರಾಜ ಮಾರ್ಗದಲ್ಲಿ ಹೊರಟಾಗ ಉಗ್ರನೃಸಿಂಹ, ಕೃಷ್ಣಸ್ವಾಮಿ ಗುಡಿ ಇತ್ಯಾದಿಗಳನ್ನು ದಾಟಿ ಹೇಮ ಕೂಟಕ್ಕೆ ಬಂದಲ್ಲಿ ಮುಂದೆ ಹಲವಾರು ಜೈನ ಬಸದಿಗಳ ನಂತರ ನದಿಯ ದಡದಲ್ಲಿ, ವಿಶಾಲವಾಗಿ ಎತ್ತರವಾಗಿ, ದೂರಕ್ಕೂ ಕಾಣಿಸುವಂತೆ, 'ವಿರೂಪಾಕ್ಷ ದೇವಸ್ಥಾನ' ಕಣ್ಣಿಗೆ ಬೀಳುತ್ತದೆ.

ಹಂಪೆಯನ್ನು ಕಟ್ಟಿಸಿದಾಗಲೇ ಈ ಗುಡಿಯನ್ನು ನಿರ್ಮಿಸಲಾಯಿತೆಂದು ಇಲ್ಲಿನ ಜನ ಹೇಳುವುದುಂಟು. ಹಂಪೆಯ ನಿರ್ಮಾಣವೇ ಇನ್ನೂ ಸರ್ವ ಸಮ್ಮತವಾದ ರೀತಿಯಲ್ಲಿ ಬಿಡಿಸಲಾಗಿಲ್ಲ.

ಆನೆಗೊಂದಿಯನ್ನು ಮಹಮದ್ ಬಿನ್ ತುಗ್ಲಕ್‌ನು 1327 ರಲ್ಲಿ ಕೈವಶ ಮಾಡಿಕೊಂಡ ಮೇಲೆ ವಿಜಯ ನಗರದ ಪ್ರಥಮ ಅರಸು ಹರಿಹರನು ಹೇಮಕೂಟ, ಮಾತಂಗ, ಮಾಲ್ಯವಂತ, ಪರ್ವತಗಳ ನಡುವೆ ಇದ್ದ ವಿರೂಪಾಕ್ಷ ದೇವಸ್ಥಾನದ ಸುತ್ತ ತನ್ನ ಹೊಸ ರಾಜಧಾನಿಯನ್ನು ನಿರ್ಮಿಸಲು ತೀರ್ಮಾನಿಸಿದನು. ಈ ಸ್ಥಳದಲ್ಲಿ ಹಂಪೆಯನ್ನು ನಿರ್ಮಿಸಲು ವಿಜಯನಗರದ ರಾಜಗುರು ವಿದ್ಯಾರಣ್ಯರು ಮೂಲ ಪ್ರೇರಕರೆಂದು ಹರಿಹರನು ಅದರ ನಿರ್ಮಾಣಕ್ಕೆ ಒಪ್ಪಿದವನೆಂದು, ಅವನ ತಮ್ಮ ಬುಕ್ಕ – 1 ಈ ನಗರವನ್ನು ಕಟ್ಟಿಸಿದನೆಂದೂ ನೀಲಕಂಠಶಾಸ್ತ್ರಿ ಹಾಗೂ ಎನ್. ವೆಂಕಟರಮಣಯ್ಯ ಅವರುಗಳು ತೀರ್ಮಾನಿಸಿದ್ದಾರೆ. ಹೀಗಾದರೂ ವಿರೂಪಾಕ್ಷ ದೇವಸ್ಥಾನ ಹಂಪೆಯ ನಿರ್ಮಾಣಕ್ಕಿಂತಲು ಮೊದಲೇ ಇದ್ದಿತು ಎಂಬುದು ಸ್ಪಷ್ಟ. ವಿರೂಪಾಕ್ಷ ದೇವಸ್ಥಾನವನ್ನು ಕುರಿತು ಚಾಳುಕ್ಯ ಆಹವಮಲ್ಲನ (ಕ್ರಿ.ಶ. 928 ನ) ಶಾಸನವೇ ಅತಿ ಪ್ರಾಚೀನವಾದುದು. ಇದಕ್ಕಿಂತಲು ಹಿಂದಿನ ಶಾಸನಾಧಾರಗಳಾಗಲಿ, ಸಾಹಿತ್ಯಾಧಾರಗಳಾಗಲೀ ಈ ದೇವಸ್ಥಾನದ ಬಗ್ಗೆ ಇಲ್ಲ. ಹಂಪೆಯ ನಿರ್ಮಾಣದ ನಂತರ ಈ ದೇವಾಲಯ ಊರ್ಜಿತಗೊಂಡು, ಕಾಲದಿಂದ ಕಾಲಕ್ಕೆ ಜೀರ್ಣೋದ್ಧಾರ ಹೊಂದಿ ಬೆಳೆಯಿತೆನ್ನಲು, ಕನ್ನಡ ಸಾಹಿತ್ಯ, ಶಾಸನ, ವಿಜಯ ನಗರಕ್ಕೆ ವಿದೇಶಗಳಿಂದ ಬಂದ, ಯಾತ್ರಿಕರ ಬರಹಗಳು ಸಾಕ್ಷ್ಯಾಧಾರಗಳನ್ನು ಒದಗಿಸುತ್ತವೆ.

ವಿರೂಪಾಕ್ಷ ಪುರದ ಪೇಟೆಯ ಸಾಲಿನ ಒಂದು ಕೊನೆಗೆ ಹೇಮಕೂಟದಿಂದ ತಗ್ಗಿನಲ್ಲಿ ನದಿಯ ದಂಡೆಯಲ್ಲಿ ದೇವಸ್ಥಾನವಿದೆ. ಮೊದಲಿಗೆ 120 ಅಡಿಗಳ ಎತ್ತರದ ಮಹಾದ್ವಾರ ಗೋಪುರ ಕಾಣಿಸುತ್ತದೆ. ಒಳಗಡೆ ಹೋಗುತಿದ್ದಂತೆ ಅನೇಕ ಮಂಟಪಗಳು ಕಂಡು ಬರುತ್ತವೆ. ಮುಂದೆ ರಾಯ ಗೋಪುರ ಎಂದು ಕರೆಯಲ್ಪಡುವ ಚಿಕ್ಕ ಗೋಪುರದ ಎಡಬದಿಗೆ ಹಲವಾರು ಕಂಬಗಳ ಪಾಕಶಾಲೆ ಇದೆ. ಎತ್ತರದ ಜಗಲಿಯ ಮೇಲೆ ಕಟ್ಟಿರುವ ಈ ಪಾಕಶಾಲೆಯಲ್ಲಿ ಒಳಗಡೆಗೆ ಸುವ್ಯವಸ್ಥಿತವಾದ ಕಲ್ಲಿನ ಕಾಲುವೆಯನ್ನು ನಿರ್ಮಿಸಲಾಗಿದೆ. ಮಹಾದ್ವಾರ ಗೋಪುರವನ್ನು ಬಿಷ್ಟಪ್ಪಯ್ಯ ನೆಂಬುವನು ಕಟ್ಟಿಸಿದನೆಂದು ಹೇಳಲಾಗಿದೆ. ಶಿವ ತತ್ತ್ವ ಚಿಂತಾಮಣಿಯಲ್ಲಿ ಇದು ಇಮ್ಮಡಿದೇವರಾಯ ನಿರ್ಮಿಸಿದ ಗೋಪುರವೆಂದು ಹೇಳಲಾಗಿದೆ.

ರಾಯ ಗೋಪುರದಿಂದ ಒಳಗೆ ಹೋದಾಗ ಎಡ, ಬಲಗಳಲ್ಲಿ ಸಾಲು, ಸಾಲು ಮಂಟಪಗಳು ದೇವಸ್ಥಾನದ ಗರ್ಭಗುಡಿಯವರೆಗೆ



ಶ್ರೀ ವಿರೂಪಾಕ್ಷ ದೇವಾಲಯ

# ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ. ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ-517507
ಚಿತ್ತೂರು ಜಿಲ್ಲೆ, ಆಂ. ಪ್ರ.

ಕಂಡುಬರುತ್ತವೆ ಸೂರ್ಯನಾರಾಯಣ, ಮುಕ್ತಿನರಸಿಂಹ, ಪಾತಾಳೇಶ್ವರ ಮೊದಲಾದ ವಿಗ್ರಹಗಳಿಗಾಗಿ ಸಣ್ಣ ಸಣ್ಣ ಮಂದಿರಗಳಿವೆ. ಗರ್ಭಗುಡಿಯ ಎಡಭಾಗಕ್ಕೆ ಮೂಲೆಯಲ್ಲಿ ವೀರಭದ್ರ, ಗಣಪತಿ, ಸರಸ್ವತಿ, ಮಹಿಷಾಸುರ ಮರ್ದಿನಿ ಮೂರ್ತಿಗಳಿವೆ. ಬಲಕ್ಕೆ ಲಕ್ಷ್ಮೀನಾರಾಯಣ ಮೊದಲಾದ ಮೂರ್ತಿಗಳಿವೆ.

ರಾಯಗೋಪುರದ ಮುಂದೆ ನಂದಿ ಮಂಟಪದ ನಂತರ ರಂಗ ಮಂಟಪದಿಂದ ಆರಂಭವಾಗುವ ವಿರೂಪಾಕ್ಷ ದೇವಸ್ಥಾನದ ಪ್ರಧಾನ ಕಟ್ಟಡ ಕಾಣುವುದು. ಇದು ಎತ್ತರವಾದ ಜಗಲಿಯ ಮೇಲೆ ಹಲವಾರು ಬೃಹದಾಕಾರದ ಕಂಭಗಳಿಂದ ಕೂಡಿದ್ದು, ಮೂರು ಕಡೆಯ ಮೆಟ್ಟಿಲುಗಳಿಂದ ಇದನ್ನು ಸೇರಬಹುದು. ದೇವಾಲಯದ ಒಳಗಡೆಗೆ ಪ್ರವೇಶವಿರುವ ಬಾಗಿಲನ್ನು ಯಾವಾಗಲೂ ಮುಚ್ಚಿರುತ್ತಾರೆ. ಈ ರಂಗ ಮಂಟಪದಲ್ಲಿ ವಿಜಯನಗರದ ಕಾಲದ ಎರಡು ಪ್ರಮುಖಾಂಶಗಳನ್ನು ಗುರುತಿಸಬಹುದು. ಅವುಗಳೆಂದರೆ ಬೃಹದಾಕಾರದ ಕಂಭಕೆತ್ತನೆಗಳು ಹಾಗೂ ಚಿತ್ರ ಕಲೆ. ಇಲ್ಲಿನ ಕಂಭಗಳಲ್ಲಿ ಹಣತೆ ಹಿಡಿದು ನಿಂತಂತೆ ಕೆತ್ತಲಾಗಿರುವ ಆನೆ, ಸಿಂಹಗಳು ಗಮನಾರ್ಹ. ಈ ರಂಗ ಮಂಟಪದ ಮೇಲ್ಚಾವಣಿಯಲ್ಲಿರುವ ವರ್ಣ ಚಿತ್ರಗಳು, ಲೇಪಾಕ್ಷಿಯ ವರ್ಣಚಿತ್ರಗಳನ್ನು ನೆನಪಿಗೆ ತರುತ್ತವೆ. ಸಹಸ್ರಾರು ಕಿರುದೀಪಗಳ ಬೆಳಕಿನಲ್ಲಿ ಮೇಲೆ ಕಾಣುವ ಮೆರವಣಿಗೆ ಹೊರಟ ಯತಿಯ ಚಿತ್ರದ ಸೌಂದರ್ಯವನ್ನು ಊಹಿಸಿಯೇ ತಿಳಿಯಬೇಕು. ಈ ಮಂಟಪವನ್ನು ಕೃಷ್ಣದೇವರಾಯನು ನಿರ್ಮಿಸಿರುವುದರಿಂದ ಮೇಲಿನ ಸನ್ಯಾಸಿಯ ಚಿತ್ರ ವ್ಯಾಸತೀರ್ಥರದಾಗಿರಬಹುದು. ಕೃಷ್ಣದೇವರಾಯನ 'ಕುಹು' ಯೋಗವನ್ನು ನಿವಾರಿಸಿದ ವ್ಯಾಸತೀರ್ಥರು ಪಂಪಾವಿರೂಪಾಕ್ಷನನ್ನು ಕುರಿತು ಸ್ತುತಿಸಿದ ಹಾಡು ಇದಕ್ಕೆ ಪೂರಕವಾಗಿದೆ. ಗರ್ಭಗೃಹದ ರಂಗಮಂಟಪಕ್ಕೆ ಬದಿಯ ಬಾಗಿಲಿನಿಂದ ಪ್ರವೇಶ. ಇಲ್ಲಿನ ಕಂಭಗಳಲ್ಲಿನ ಚಿತ್ರಗಳು ಮುದ್ದಾದ ಶೈಲಿಯಲ್ಲಿವೆ. ಕೃಷ್ಣದೇವರಾಯನ ಶಾಸನವೂ (ಕ್ರಿ.ಶ. 1513) ಅವನ ಅಜ್ಜಿ ಬುಕ್ಕಮಹಾದೇವಿಯ ಶಾಸನವೂ ಇಲ್ಲಿವೆ.

ಗರ್ಭ ಗೃಹದ ಸುತ್ತ ಇರುವ ಪ್ರದಕ್ಷಿಣ ಪಥಕ್ಕೆ ಪ್ರವೇಶಾವಕಾಶವಿಲ್ಲ. ಗರ್ಭಗೃಹದಲ್ಲಿರುವ ವಿರೂಪಾಕ್ಷಲಿಂಗ ಇಂದೂ ಅಸಂಖ್ಯ ಯಾತ್ರಿಕರನ್ನು ಹಂಪೆಯ ಐತಿಹಾಸಿಕ ಸ್ಮಾರಕಗಳ ಹೊರತಾಗಿಯೂ ಆಕರ್ಷಿಸುತ್ತಿರುವ ದೈವ. ಪಂಪಾದೇವಿಯ ತಪಸ್ಸಿಗೆ ಮೆಚ್ಚಿ ಅವಳನ್ನು ವಿರೂಪಾಕ್ಷನು ಮದುವೆಯಾಗಿ ಇಲ್ಲಿ ನಿಂದನೆಂಬ ಕಾರಣದಿಂದ ಇದು ಪಂಪಾಕ್ಷೇತ್ರ ಎಂದು ಹೆಸರಾಯಿತು. ವಿರೂಪಾಕ್ಷದೇವರ ಉತ್ತರಕ್ಕೆ ಪಂಪಾದೇವಿ ಹಾಗೂ ಭುವನೇಶ್ವರಿ ಮಂದಿರಗಳಿವೆ. ಭುವನೇಶ್ವರೀ ಗರ್ಭಗೃಹದ ಮೇಲ್ಚಾವಣಿಯ ಅಷ್ಟದಿಕ್ಪಾಲಕರ ಕೆತ್ತನೆ, ಗರ್ಭಗುಡಿಯ ಬಾಗಿಲುಗಳ ಕುಸುರಿ ಕೆಲಸ ಅಚ್ಚರಿಗೊಳಿಸುವ ಸೌಂದರ್ಯ ಹೊಂದಿವೆ. ದೇವಾಲಯದ ಹೊರಕ್ಕೆ ನದಿಯ ಕಡೆಗೆ ಇರುವ ಗೋಪುರದ ಅಡಿಯಲ್ಲಿ ಹೊರಟಾಗ ಅನೇಕ ಸಣ್ಣ ಸಣ್ಣ ಗುಡಿಗಳಿವೆ. ಇಲ್ಲಿಯೇ ಬದಿಯಲ್ಲಿ ಮನ್ಮಥಕುಂಡವಿದೆ. ಪಂಪಾದೇವಿಯ ತೆಪ್ಪೋತ್ಸವ ಇಲ್ಲಿ ನಡೆಯುತ್ತದೆ. ಗುಡಿಯಲ್ಲಿ ಅನೇಕ ಕಡೆ ಕನ್ನಡದ ಹಿರಿಯ ಕವಿಗಳೂ ವಿರೂಪಾಕ್ಷನ ಹಿರಿಯ ಭಕ್ತರೂ ಆದ ಹರಿಹರ, ರಾಘವಾಂಕರುಗಳ ಕಾವ್ಯಗಳ ಸ್ತೋತ್ರ ಪದ್ಯಗಳನ್ನು ಬರೆಯಲಾಗಿದೆ. ಹರಿಹರನಂತೂ ಪಂಪಾ ವಿರೂಪಾಕ್ಷನ ಅದ್ವಿತೀಯ ಭಕ್ತ, ಪಂಪಾ ಶತಕವನ್ನೇ ಬರೆದು ವಿರೂಪಾಕ್ಷನಿಗೆ ಒಪ್ಪಿಸಿದವನು. ಈಚೆಗೆ ಆದವಾನಿಯ ಜಿ. ಕೇಶವ ಶಾಸ್ತ್ರಿಯವರಿಂದ ರಚಿತವಾದ ಶ್ರೀವಿರೂಪಾಕ್ಷೇಶ್ವರಸ್ವಾಮಿಯ ಸುಪ್ರಭಾತವನ್ನು ಹಾಡಲಾಗುತ್ತಿದೆ.

ಬಳ್ಳಾರಿ ಜಿಲ್ಲೆಯ ಹೊಸಪೇಟೆಯಿಂದ ಹಂಪೆಗೆ ವಾಹನ ಸೌಕರ್ಯವಿದೆ. ಅತಿ ಹತ್ತಿರವೇ ಇರುವುದರಿಂದ ಹಂಪೆಯಿಂದ ಹೊಸಪೇಟೆಗೆ ಹಿಂದಿರುಗಲೂ ಅವಕಾಶಗಳಿವೆ. ಹಂಪೆಯಲ್ಲಿಯೇ ವಿರೂಪಾಕ್ಷಸ್ವಾಮಿ ದೇವಸ್ಥಾನದ ಆಡಳಿತ ವರ್ಗದವರ ಸುಲಭದರದ ಕೊಠಡಿಗಳ ಸೌಕರ್ಯವೂ ಇದೆ. ಹಂಪೆಯ ಅವಶೇಷಗಳನ್ನು ನೋಡುವವರಿಗಾಗಿ ಪ್ರವಾಸೋದ್ಯಮ ಇಲಾಖೆಯವರ ಉಪಹಾರ ಮಂದಿರವೂ, ಖಾಸಗಿ ಉಪಹಾರ ಗೃಹಗಳೂ ಇವೆ. ★

# ವಚನೋದ್ಯಾನ

ಹರ ತನ್ನ ಭಕ್ತರ ತಿರಿವಂತೆ ಮಾಡುವ
ಒರೆದು ನೋಡುವ ಸುವರ್ಣದ ಚಿನ್ನದಂತೆ
ಅರೆದು ನೋಡುವ ಚಂದನದಂತೆ
ಅರಿದು ನೋಡುವ ಕಬ್ಬಿನ ಕೋಲಿನಂತೆ
ಬೆದರದೆ ಬೆಚ್ಚದೆ ಇದ್ದರೆ
ಕರೆವಿಡಿದೆತ್ತಿಕೊಂಬ ನಮ್ಮ ರಾಮನಾಥ

× × ×

ಕತ್ತೆ ಬಲ್ಲುದೆ ಕತ್ತುರಿಯ ವಾಸನೆಯ
ತೊತ್ತು ಬಲ್ಲಳೆ ಗುರುಹಿರಿಯರುತ್ತಮರೆಂಬುದ
ಭಕ್ತಿಯರಿಯದ ವ್ಯರ್ಥಜೀವಿಗಳು ನಿಮ್ಮ ನೆತ್ತಬಲ್ಲರೈ
ರಾಮನಾಥ

× × ×

ಮರದೊಳಗಣ ಮಂದಾಗ್ನಿಯ ಉರಿಯದಂತಿರಿಸಿದೆ
ನೊರೆವಾಲೊಳಗೆ ತುಪ್ಪವ ಕಂಪಿಲ್ಲದಂತಿರಿಸಿದೆ
ಶರೀರ ದೊಳಗಾತ್ಮನ ಕಾಣದಂತಿರಿಸಿದೆ
ನೀ ಬೆರಸುವ ಭೇದಕ್ಕೆ ಬೆರಗಾದೆನೈ ರಾಮನಾಥಾ
—ದೇವರ ದಾಸಿಮಯ್ಯ.

ಅಯ್ಯಾ ನೀ ಮಾಡಲಾದ ಜಗತ್ತು
ಅಯ್ಯಾ ನೀ ಮಾಡಲಾದ ಸಂಸಾರ
ಅಯ್ಯಾ ನೀ ಮಾಡಲಾದ ಮದುವೆ
ಅಯ್ಯಾ ನೀ ಮಾಡಲಾದ ದುಃಖ
ಅಯ್ಯಾ ನೀ ಬಿಡಿಸಿದರೆ ಬಿಟ್ಟಿತ್ತು ತಾಮಸವಯ್ಯ !
ನಾನೀ ಮಾಯೆಯ ಗೆದ್ದನೆಂಬ ಹಮ್ಮಿದೇಕೆ
ಕೂಡಲಸಂಗಮ ದೇವಾ

× × ×

ನರವಿಂಧ್ಯದೊಳಗೆನ್ನ ಹುಲುಗಿಳಿಯ ಮಾಡಿ
ಸಲುಹುತ್ತ 'ಶಿವಾ' ಎಂದೋದಿಸಯ್ಯ
ಭಕ್ತಿ ಎಂಬ ಪಂಜರವೊಳಗಿಕ್ಕಿ ಸಲಹು
ಕೂಡಲಸಂಗಮದೇವಾ

× × ×

ಹೊರಿಸಿಕೊಂಡು ಹೋದ ನಾಯಿ ಮೊಲನೇನ
ಹಿಡಿವುದಯ್ಯ ?
ಇರಿಯದ ವೀರ ಇಲ್ಲದ ಸೊಬಗುವ ಹೇಳುವುದೇ ನಾಚಿಕೆ
ಆನು ಭಕ್ತನೆಂತೆಂಬೆನಯ್ಯ ಕೂಡಲಸಂಗಮದೇವಾ
—ಬಸವಣ್ಣ.

ಒಂದು ಇಲ್ಲದ ಬಿಂಬವ ತಂದೆಯಿಲ್ಲದ ಕಂದನ
ಮಾತೆಯಿಲ್ಲದ ಜಾತನ, ಗಮನವಿಲ್ಲದ ಗಮ್ಯನ
ಮೂವರರಿಯದ ಮುಗ್ಧನ ರಾವ ತೋರಿಸು ಗುಹೇಶ್ವರಾ

× × ×

ಅಜ್ಞಾನಿಯಾದವಂಗೆ ಅರಿವು ತಾನೆಲ್ಲಿಯದೊ ?
ಸುಜ್ಞಾನಿಯಾದವಂಗೆ ಮರೆವು ತಾನೆಲ್ಲಿಯದೊ ?
ನಾನರಿದೆನೆಂಬಾತ ಇದಿರ ಕೇಳಲುಂಟೇ ?
ಭ್ರಾಂತಿನ ಭ್ರಮೆಯೊಳಗೆ ಬಳಲುತ್ತಿರಲು
ಮಾತಿನ ಮಾಲೆಯೊಳಗೆ ಅರಿವೆಂಬುದುಂಟೆ ?
ಸೂತಕ ಹಿಂಗದೆ, ಸಂದೇಹವಳಿಯದೆ
ಮುಂದಳ ಸೂಕ್ಷ್ಮವ ಕಾಂಬ ಪರಿಯೆಂತೊ ?
ಜ್ಯೋತಿಯ ಬಸಿರೊಳಗೆ ಜನಿಸಿದ ಕಾಂತಿಯ
ಪ್ರಭೆಯ ಬೆಳಗು ಗುಹೇಶ್ವರಾ ನಿಮ್ಮ ಶರಣ

× × ×

ನೀ ನಾನೆಂಬ ಭಾವವಾರಿಂದಾಯಿತ್ತು ಹೇಳಾ
ನೀನೆಂಬುದು ಅಜ್ಞಾನ ನಾನೆಂಬುದು ಮಾಯಾಧೀನ
ನೀನೆನ್ನದೆ ನಾನೆನ್ನದೆ ಇಪ್ಪ ಸುಖವ ಭಿನ್ನವಿಲ್ಲದೆ ಅರಿಯ
ಬಲ್ಲಡೆ
ಆ ಸುಖವು ನಿಮಗರ್ಪಿತ ಕಾಣಾ ಗುಹೇಶ್ವರಾ
—ಅಲ್ಲಮಪ್ರಭು.

ಕುಡಿವ ನೀರೆನ್ನಬಹುದೇ ನೀರಲದ್ದುವಾಗ ?
ಅಡುವ ಕಿಚ್ಚೆನ್ನಬಹುದೇ ಮನೆಯ ಸುಡುವಾಗ ?
ಒಡಲು ತನ್ನದೆನ್ನಬಹುದೆ ಪುಣ್ಯಪಾಪವನುಂಬಾಗ ?
ಜೀವ ತನ್ನದೆನ್ನಬಹುದೇ ಮಿಕ್ಕು ಹೋಹಾಗ ?
ಇವನೊಡಬಡಿದು ಕಳೆ ಎಂದನಾತನಂಬಿಗರ ಚೌಡಯ್ಯ

× × ×

ಅಡವಿಯ ಹೊಗಿಸಿತ್ತು ನೀರಲದ್ದಿತ್ತು ಜಡೆಗಟ್ಟಿ,
ಭಸ್ಮವ ತೊಡಿಸಿತ್ತು ಹಿಡಿದೆತ್ತಿ ಕೇಶವ ಕೀಳಿಸಿತ್ತು
ಹುಡಿ ಹುಚ್ಚು ಗೊಳಿಸಿತ್ತು ಊರೊಳಗೆಲ್ಲ
ಬೆಡಗಿನ ಮಾಯೆಗೆ ನಾಚುವೆನೆಂಬನಂಬಿಗರ ಚೌಡಯ್ಯ

× × ×

ಅರಿಯದ ಗುರು ಅರಿಯದ ಶಿಷ್ಯ ಇವರಿಬ್ಬರಿಗೇನಪ್ಪುದೋ ?
ಕುರುಡ ಕುರುಡನ ಕೈಯ್ಯ ಪಿಡಿದು ಪಥವ ನಡೆಯಬಲ್ಲರೇ ?
ತೊರೆಯಲದ್ದಿಹೋಹವನ ಈಸಲರಿಯದವ
ತೆಗೆದಂತಾಯಿತ್ತೆಂದನಂಬಿಗರ ಚೌಡಯ್ಯ
—ಅಂಬಿಗರ ಚೌಡಯ್ಯ.

ಪದಾರ್ಥ ಪದಾರ್ಥ ಎಂದೆಂಬಿರಿ
ಪದವಾವುದು ಅರ್ಥವಾವುದು ಎಂದರಿಯಿರಿ
ಪದವೇ ಲಿಂಗ ಅರ್ಥವೇ ಭಕ್ತಿ ಇದನರಿದು
ಪದಾರ್ಥವೆಂದು ತಂದು ಅರ್ಪಿತವ ಮಾಡಬಲ್ಲಡೆ
ಕೊಡಿಪ್ಪನಯ್ಯ ನಮ್ಮ ಕೂಡಲ ಚೆನ್ನ ಸಂಗಮದೇವ

× × ×

ಪರುಷದ ಪರ್ವತದಲ್ಲಿ ಕಬ್ಬುನ ಉಂಟೇ ಅಯ್ಯ ?
ಅಷ್ಟ ವಿಧಾರ್ಚನೆ ಶೋಡಷೋಪಚಾರ ಮಾಡುವಾತಂಗೆ
ಅವಗುಣವುಂಟೇ ಅಯ್ಯ ? ಇದು ಕಾರಣವಾಗಿ
ಭಕ್ತಕಾಯ ಮಮಕಾಯವಯ್ಯ
ಕೂಡಲ ಚೆನ್ನಸಂಗಮದೇವಾ

× × ×

ಕಾಯವಿಲ್ಲದ ಸಂಸಾರ ಚೋದ್ಯ
ಕಾಯದೊಳಗೆ ನಿರಾಳ ಚೋದ್ಯ
ನಿರಾಳದೊಳಗೊಂದು ಕೂಡಲ ಚೆನ್ನಸಂಗಯ್ಯನೆಂಬ
ಶರಣ ಸಮ್ಯಕ್ ಚೋದ್ಯ, ಮಹಾಚೋದ್ಯ
—ಚೆನ್ನಬಸವಣ್ಣ.

ಕೈಯಲ್ಲಿ ಹಿಡಿದು ಕಾಂಬುದು ಕರ್ಮದ ಪೂಜೆಯಲ್ಲವೇ ?
ಮನದಲ್ಲಿ ನೆನೆದು ಮಾಡುವುದೆಲ್ಲವೂ ಕಾಯದ
ಕರ್ಮವಲ್ಲವೇ ?
ಭಾವ ಶುದ್ಧವನರಿವ ಪರಿ ಇನ್ನು ಆವುದು
ಕಪಿಲಸಿದ್ಧ ಮಲ್ಲಿಕಾರ್ಜುನಾ

× × ×

ಆರೇನೆಂದರೂ ಓರಂತಿಪ್ಪುದೇ ಸಮತೆ
ಆರು ಜರೆದರೂ ಅವರೆನ್ನ ಮನದ ಕಾಳಿಕೆಯ
ಕಳೆದರೆಂಬುದೇ ಸಮತೆ

ಆರು ಸ್ತೋತ್ರ ಮಾಡಿದರೂ ಅವರೆನ್ನ ಜನ್ಮದ
ಹಗೆಗಳೆಂಬುದೇ ಸಮತೆ
ಇಂತಿದು ಗುರುಕಾರುಣ್ಯ ಮನವಚನ ಕಾಯದಲ್ಲಿ
ಅಹಿತವಿಲ್ಲದೆ
ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ನಿಮ್ಮವರ
ನೀನೆಂಬುದೇ ಸಮತೆ

× × ×

ಕಲ್ಪ ವೃಕ್ಷ ಮರವೆನ್ನಬಹುದೇ ? ಕಾಮಧೇನು
ಪಶುವೆನ್ನ ಬಹುದೇ ?
ಪರುಷ ಪಾಷಾಣವೆನ್ನಬಹುದೇ ? ನಮ್ಮ ಕಪಿಲಸಿದ್ಧ
ಮಲ್ಲಿಕಾರ್ಜುನನ ನುಂಗಿದವರೆಲ್ಲ ಮಾನವರೆನ್ನಬಹುದೇ ?
—ಸಿದ್ಧರಾಮ

ಕಿಚ್ಚಿಲ್ಲದ ಬೇಗೆಯಲ್ಲಿ ಬೆಂದೆನವ್ವಾ
ಏರಿಲ್ಲದ ಗಾಯದಲ್ಲಿ ನೊಂದೆನವ್ವಾ
ಸುಖವಿಲ್ಲದ ಧಾವತಿಗೊಂಡೆನವ್ವಾ
ಚೆನ್ನಮಲ್ಲಿಕಾರ್ಜುನ ದೇವರಿಗೊಲಿದು
ಬಾರದ ಭವಗಳಲಿ ಬಂದೆನವ್ವಾ

× × ×

ಅಳಿಸಂಕುಳವೇ, ಬೆಳುದಿಂಗಳೇ, ಕೋಗಿಲೆಯೆ,
ನಿಮ್ಮನೆಲ್ಲರನು ಒಂದು ಬೇಡುವೆನು
ಎನ್ನೊಡೆಯ ಚೆನ್ನಮಲ್ಲಿಕಾರ್ಜುನ ದೇವರ
ಕರೆದು ತೋರಿರೆ

× × ×

ಹಸಿವಾದೊಡೆ ಭಿಕ್ಷಾನ್ನಗಳುಂಟು,
ತೃಷೆಯಾದೊಡೆ ಕೆರೆ ಹಳ್ಳ ಬಾವಿಗಳುಂಟು
ಶಯನಕ್ಕೆ ಹಾಳುದೇಗುಲಗಳುಂಟು
ಚೆನ್ನಮಲ್ಲಿಕಾರ್ಜುನಯ್ಯ ಆತ್ಮ ಸಂಗಾತಕ್ಕೆ ನೀನೆನಗುಂಟು
– ಅಕ್ಕಮಹಾದೇವಿ.

(20ನೇ ಪುಟದಿಂದ)

ಎತ್ತಲು ಬಟ್ಟಲಿನಲ್ಲಿ ಏನೋ ಬಿದ್ದಂತಾಗಲು ನೋಡಲು ತನ್ನ ಮೂಗುತಿಯನ್ನು ಕಂಡು ಭಕ್ತಿ ಭಾವಾವೇಶಗಳಿಂದ ಕೂಡಿ ಪತಿಯ ಕೈಗೆ ಮೂಗುತಿಯನ್ನು ಕೊಡುತ್ತಾಳೆ. ನಾಯಕನು ಇನ್ನೂ ಆಶ್ಚರ್ಯದಿಂದ ಕೂಡಿದವನಾಗಿ ಅಂಗಡಿಗೆ ಹೋಗಿ ನೋಡಲಾಗಿ ಪೆಟ್ಟಿಗೆಯ ಬೀಗಮುದ್ರೆಗಳು ಮಾಮೂಲಿನಂತಿರಲು ತೆರೆದು ನೋಡಲು ಭರಣಿಯಲ್ಲಿ ಮೂಗುತಿ ಇರಲಿಲ್ಲ. ಅತ್ಯಾಶ್ಚರ್ಯದಿಂದ ಮನೆಗೆ ಬಂದು ಹೆಂಡತಿಯೊಡನೆ ನಡೆದ ಸಂಗತಿಯನ್ನು ತಿಳಿಸಿ 'ಮೂಗುತಿ ನಿನಗೆ ಹೇಗೆ ಬಂದಿತು' ಎಂದು ಕೇಳಿದನು ಪರಮ ಭಕ್ತ ನಾರೀಮಣಿ ಸರಸ್ವತೀ ಬಾಯಿಯು ನಡೆದುದೆಲ್ಲವನ್ನೂ ಗಂಡನಲ್ಲಿ ಹೇಳಿದಳು.

ನಾಯಕನು ಆ ಬ್ರಾಹ್ಮಣನನ್ನು ಹುಡುಕಿ ಕರೆತೆರುವಂತೆ ಸೇವಕರನ್ನು ಕಳಿಹಿಸಿದನು. ಸೇವಕರು ಆದರಂತೆ ಹುಡುಕಲು ಅಕ್ಕ ಪಕ್ಕದ ಅಂಗಡಿಯವರಾಗಲಿ, ಗ್ರಾಮದವರಾಗಲಿ ನಾವು ಅಂತಹ ಬ್ರಾಹ್ಮಣನನ್ನು ಕಾಡುದಿಲ್ಲವೆಂದು ಹೇಳಿದರು. ಆ ಸಮಾಚಾರವನ್ನು ತಿಳಿದ ನಾಯಕನು ಬಂದಿದ್ದ ಬ್ರಾಹ್ಮಣನು ದೇವರಲ್ಲದೆ ಇಂಥ ಆಶ್ಚರ್ಯಕರ ಘಟನೆಗಳು ನಡೆಯಲು ಸಾಧ್ಯವಿಲ್ಲವೆಂದು ತಿಳಿದು ತನಗಿದ್ದ ಸಂಪತ್ತೆಲ್ಲವೂ ನಿಷ್ಪ್ರಯೋಜನ; ಏಕೆಂದರೆ ಬ್ರಾಹ್ಮಣ ರೂಪದಲ್ಲಿ ಬಂದ ದೇವರಿಗೆ ಏನೂ ಕೊಡಲಿಲ್ಲ ಅಷ್ಟಸಂಪದೈಶ್ವರ್ಯವಿದ್ದರೂ ಬ್ರಾಹ್ಮಣನ ಕರ್ಮವಾದ ಉಪನಯನಕ್ಕೆ ಕಿಂಚಿತ್ತು ಸಹಾಯ ಮಾಡದ್ದಕ್ಕಾಗಿ ವ್ಯಥೆ ಹೊಂದಿ ಪತ್ನಿಯಲ್ಲಿ ಬಂದು 'ನೀನು ಮಹಾಭಾಗ್ಯಶಾಲಿ ನಾನು ಸಾಹುಕಾರನಾಗಿದ್ದಾಗ್ಯೂ ಸಹ ಏನೂ ಕೊಡದೆ ದೇವರನ್ನು ಹೀಯಾಳಿಸಿ ಕಳುಹಿಸಿದೆ· ಇದೆಲ್ಲಕ್ಕೂ ಕಾರಣ ನನ್ನಲ್ಲಿರುವ ಸಂಪತ್ತು, ಲುಬ್ಧತ್ವವೇ' ಎಂದೂ ಇದೆಲ್ಲ ಅಸ್ಥಿರವೆಂಬ ಜ್ಞಾನೋದಯವುಂಟಾಗಿ ತನ್ನಲಿದ್ದ ಐಶ್ವರ್ಯವನ್ನೆಲ್ಲ ಕೃಷ್ಣಾರ್ಪಣಮಸ್ತು ಎಂದು ಹೇಳಿ ಬಡಬಗ್ಗರಿಗೆ ದಾನಮಾಡಿ ತಮ್ಮಲ್ಲಿದ್ದ ತಂಬೂರಿ, ಪತ್ನಿ ಮತ್ತು ನಾಲ್ಕು ಜನ ಮಕ್ಕಳೊಡನೆ ಉಟ್ಟಬಟ್ಟೆಯಲ್ಲಿ ಪಂಡರೀನಾಥನ ದರ್ಶನಕ್ಕಾಗಿ ಪಂಡರಾಪುರಕ್ಕೆ ಹೊರಟ. ಅಲ್ಲಿ ಪಂಡರಿನಾಥನ ಸೇವೆಯನ್ನು ಮಾಡುತ್ತಾ ಇದ್ದ.

ಒಂದು ದಿನ ಶ್ರೀನಿವಾಸನಾಯಕರ ಕನಸಿನಲ್ಲಿ ಸ್ವಾಮಿಯು 'ನೀನು ಇಲ್ಲಿರ ಬೇಡ. ಹಂಪೆ ಎಂಬಲ್ಲಿ ವ್ಯಾಸರಾಯರೆಂಬ ಹರಿಭಕ್ತರೊಬ್ಬರಿದ್ದಾರೆ. ಅವರಲ್ಲಿ ಹೋಗಿ ಶಿಷ್ಯ ವೃತ್ತಿಯನ್ನು ಮಾಡಿ ಜ್ಞಾನೋಪದೇಶವನ್ನು ಪಡೆ' ಎಂದು ಹೇಳಿದಂತಾಗಲು ಅಲ್ಲಿಂದ ನಾಯಕರು ಹಂಪೆಗೆ ಬಂದರು. ಶ್ರೀ ವ್ಯಾಸರಾಯರು ಮಧ್ವಮತದ ಗುರುಗಳು. ಯತಿಶ್ರೇಷ್ಠರು. ಇವರೂ ಸಹ ಶ್ರೀನಿವಾಸನಾಯಕರು ಬರುವ ವಿಷಯ ಸ್ವಪ್ನದಲ್ಲಿ ತಿಳಿದಿದ್ದರು.

(ಸಶೇಷ)

# ರತ್ನಾಕರ ಹಾಗೂ ಹರವಿಜಯ

ಶ್ರೀ ಯಂ. ವಿ. ಸಂಪತ್ಕುಮಾರಾಚಾರ್

ಪವಿತ್ರವಾದ ಭಾರತ ಭೂಮಿಯಲ್ಲಿ ಅನೇಕ ಕವಿಪುಂಗವರು, ಜ್ಞಾನಿಗಳು ವಿಜ್ಞಾನಿಗಳು, ಆಚಾರ್ಯರು, ವಚನಕಾರರು ಭಕ್ತಾಗ್ರೇಸರರು, ದೇಶಭಕ್ತರು, ಸಮಾಜೋದ್ಧಾರಕರು, ಜನ್ಮತಾಳಿ ತಮ್ಮ ಮಹತ್ವದಿಂದ ಹೆಸರನ್ನು ಶಾಶ್ವತಗೊಳಿಸಿರುತ್ತಾರೆ.

ಅಂತಹವರಲ್ಲಿ ಸಂಸ್ಕೃತಸಾಹಿತ್ಯದ ಅಭಿವೃದ್ಧಿಗಾಗಿ ಶ್ರಮಿಸಿ, ಅನೇಕ ಕಾವ್ಯ–ನಾಟಕ – ಮೊದಲಾದ ಉತ್ತಮಗ್ರಂಥಗಳನ್ನು ರಚಿಸಿದ ಮಹಾಕವಿಗಳು ಅನೇಕರು. ಆದರೆ ಅವರಲ್ಲಿ ಕೆಲವರು ಅತಿಪ್ರಸಿದ್ಧರಾಗಿ ಜನರಿಗೆ ಚಿರಪರಿಚಿತರಾಗಿರುತ್ತಾರೆ. ಮತ್ತೆ ಕೆಲವರು ಅಮೋಘಗ್ರಂಥಗಳನ್ನು ರಚಿಸಿದ್ದರೂ ಪ್ರಸಿದ್ಧಿಗೆ ಬರದೇ "ಕುಸುಮಸ್ತಬಕಸ್ಯೇವ ದ್ವೇ ಗತೀ ಸ್ತೋ ಮನೀಷಿಣಃ ಮೂರ್ಧ್ನಿ ವಾ ಸರ್ವಲೋಕಸ್ಯ ವಿಶೀರ್ಯೇತ ವನೇಽಥವಾ" ಎಂಬ ಭರ್ತೃಹರಿಯ ಉಕ್ತಿಯಂತೆ, ಉತ್ತಮವಾದ ಕುಸುಮದಂತೆ ವಿದ್ವಾಂಸರೂ ಲೋಕದಲ್ಲಿ ವಿಶೇಷವಾಗಿ ಶೋಭಿಸುತ್ತಾರೆ. ಅಥವಾ ಜನ್ಮತಾಳಿದ ಪ್ರದೇಶದಲ್ಲಿಯೇ ಬಾಡಿಹೋಗುತ್ತಾರೆ. ತಮ್ಮ ಜನ್ಮಭೂಮಿಯಲ್ಲಿಯೇ ಕಣ್ಮರೆಯಾಗಿರುತ್ತಾರೆ. ಇದಕ್ಕೆ ಕಾರಣಗಳು ಅನೇಕವಾಗಿವೆ–ಕೆಲವರ ಕೃತಿಗಳು ಬಹಳ ಲಲಿತವಾಗಿಲ್ಲದೇ ಇರಬಹುದು. ಅಥವಾ ಆ ಕವಿಗಳಿಗೆ ಸರಿಯಾದ ಆಶ್ರಯದಾತರು ದೊರೆಯದೆ ಅವರ ಕೃತಿಗಳು ಪ್ರಸಿದ್ಧಿಗೆ ಬರುವ ಅವಕಾಶವನ್ನು ಕಳೆದುಕೊಂಡಿರಬಹುದು. ಮತ್ತೆ ಕೆಲವು ಕೃತಿಗಳು ತಾಳಪತ್ರದಲ್ಲಿಯೇ ಇದ್ದು ಅದರ ಸರಿಯಾದ ಉತ್ಕರ್ಷವು ತಿಳಿಯದವರ ಕೈಯಿಗೆ ಸಿಕ್ಕಿ ನಾಶವಾಗಿರಬಹುದು. ಅನರ್ಘ್ಯವಾದ ಅನೇಕ ತಾಳಪತ್ರಗಳನ್ನು ಅನೇಕರು ನಿಷ್ಪ್ರಯೋಜಕವೆಂದು ಭಾವಿಸಿ ಸೌದೆಗೆ ಬದಲಾಗಿ ಉಪಯೋಗಿಸಿರುವುದೂ, ನೆಲದಲ್ಲಿ ಹೂತು ಬಿಟ್ಟಿರುವುದೂ, ಅಥವಾ ಯಾವುದಾದರೂ ಜಲಾಶಯದಲ್ಲಿ ಅವನ್ನು ಎಸೆದಿರುವುದೂ ಸರ್ವವಿದಿತವಾದ ವಿಚಾರ. ಈ ಕಾರಣಗಳಿಂದ ಸಾವಿರಾರು ಗ್ರಂಥರತ್ನಗಳು ಲುಪ್ತವಾಗಿವೆ. ಅವನ್ನು ಸರಿಯಾಗಿ ಉಪಯೋಗಿಸಿಕೊಳ್ಳುವಷ್ಟು ಒಳ್ಳೆಯ ಸಂಸ್ಕಾರವನ್ನು ನಾವು ಕಳೆದುಕೊಂಡಿರುವೆವೆಂದು ಬಹಳ ವಿಷಾದದಿಂದ ತಿಳಿಸಬೇಕಾಗಿದೆ. ಅದು ನಮ್ಮ ದುರ್ದೈವ.

ಕೇವಲ ಮಹಾಕವಿಯಾದರೆ ಮಾತ್ರ ಸಾಲದು. ತಾವು ಮತ್ತು ತಮ್ಮ ಕೃತಿಗಳು ಪ್ರಸಿದ್ಧಿಗೆ ಬರಬೇಕಾದರೆ ಅದೃಷ್ಟವೂ ಸುಯೋಗವೂ ಅತ್ಯಗತ್ಯ.

ಶ್ರೀಹರ್ಷನ 'ನೈಷಧೀಯಚರಿತ' ಮತ್ತು 'ಮುರಾರಿ' ಕವಿಯ 'ಅನರ್ಘರಾಘವ' ಗ್ರಂಥಗಳು ಅತಿಕ್ಲಿಷ್ಟವಾದರೂ ಪ್ರಸಿದ್ಧಿಗೆ ಬಂದಿವೆ.

ಮೇಲೆ ವಿವರಿಸಿರುವ ಯಾವುದಾದರೂ ಕಾರಣದಿಂದ 'ಹರವಿಜಯ ಮಹಾಕಾವ್ಯ'ವು ಹೆಚ್ಚು ಪ್ರಸಿದ್ಧಿಗೆ ಬಂದಿರಲಾರದು.

'ಹರವಿಜಯ' ವೆಂಬ ಹೆಸರಿನಿಂದಲೇ ಆಕಾವ್ಯದ 'ಕಥಾವಸ್ತು'ವು ಪರಮೇಶ್ವರನ, ವಿಜಯ ವಿಚಾರಕ್ಕೆ ಸಂಬಂಧಿಸಿದ್ದು – ಎಂಬುದು ಸುಸ್ಪಷ್ಟ.

ಪರಮೇಶ್ವರನು ಅಂಧಕಾಸುರನನ್ನು ಜಯಿಸಿದ ಕಥಾವಸ್ತುವನ್ನು ಆರಿಸಿಕೊಂಡು ಈ ಮಹಾಕವಿಯು 50 ಸರ್ಗದ ಒಂದು ಮಹಾಕಾವ್ಯವನ್ನು ರಚಿಸಿರುವುದಾಗಿ ತಿಳಿದು ಬರುತ್ತದೆ. ಈ ಮಹಾಕಾವ್ಯದ ಒಟ್ಟು ಶ್ಲೋಕಗಳು 4321. ಇದಲ್ಲದೆ ಇವನು "ವಕ್ರೋಕ್ತಿಪಂಚಾಶಿಕಾ" ಎಂಬ ಗ್ರಂಥವನ್ನು ರಚಿಸಿರುವನೆಂದು ತಿಳಿದುಬರುತ್ತದೆ. ಇದು ಬೊಂಬಾಯಿನ ನಿರ್ಣಯಸಾಗರದ ಮುದ್ರಣಾಲಯದಿಂದ ಮುದ್ರಿಸಲ್ಪಟ್ಟಿರುವ "ಕಾವ್ಯಮಾಲಾ–ಗುಚ್ಛಿಕಾ"ದಲ್ಲಿ 101–114 ನೆಯ ಪುಟಗಳಲ್ಲಿ ಪ್ರಕಾಶಗೊಂಡಿದೆ. ಇದಲ್ಲದೆ, "ಧ್ವನಿಗಾಥಾಪಂಚಿಕಾ" ಎಂಬ ಗ್ರಂಥವನ್ನು ರಚಿಸಿರುವನೆಂದು ತಿಳಿದು ಬರುತ್ತದೆ.

"ಹರವಿಜಯ" ಮಹಾಕಾವ್ಯದ ಪ್ರತಿ ಸರ್ಗದ ಕೊನೆಯಲ್ಲೂ "ರತ್ನ" ಎಂಬ ಅಂಕಿತದಿಂದ ಸರ್ಗವು ಮುಗಿಯುವುದರಿಂದ ಇದನ್ನು "ರತ್ನಾಂಕ" ಕಾವ್ಯವೆಂದು ಕರೆಯುತ್ತಾರೆ ಇದನ್ನು ರಚಿಸಿದವನು "ರತ್ನಾಕರ ಮಹಾಕವಿ.

ರತ್ನಾಕರನ ವಿಚಾರವಾಗಿ ಸ್ವತಃ ಕವಿಯೇ ಗ್ರಂಥಾರಂಭದಲ್ಲಿ ಗ್ರಂಥಕರ್ತ ಪ್ರಶಸ್ತಿ ಎಂದು ತಿಳಿಸಿರುವ ವಿಚಾರಕ್ಕಿಂತ ಅಧಿಕವಾದ ವಿವರಗಳು ನಮಗೆ ದೊರೆಯುವುದಿಲ್ಲ. ಅದರಿಂದ ಅವನು 'ಅಮೃತಭಾನು' ವಿನಪುತ್ರನೆಂದೂ 'ಬಾಲ ಬೃಹಸ್ಪತಿ' ಮಹಾರಾಜನ ಆಶ್ರಯದಲ್ಲಿದ್ದನೆಂದೂ 'ವಿದ್ಯಾಪತಿ'ಯೆಂದು ಪ್ರಸಿದ್ಧನಾಗಿದ್ದನೆಂದೂ, ಅವನಿಗೆ 'ವಾಗೀಶ್ವರ' ನೆಂಬ ಪ್ರಶಸ್ತಿ ಇದ್ದಿತೆಂದೂ ತಿಳಿದು ಬರುತ್ತದೆ. 'ರತ್ನಾಕರನಿಗೆ' 6 ಭಾಷೆಗಳಲ್ಲಿ ಪ್ರಭುತ್ವವಿದ್ದಿತೆಂದೂ, ಅವನು ಬಾಣಭಟ್ಟನನ್ನು ಅಧಿಕವಾಗಿ ಗೌರವಿಸಿರುವನೆಂದೂ ಅವನ ಮಾರ್ಗವನ್ನು ಅನುಸರಿಸಿರುವನೆಂದೂ ವಿದಿತವಾಗುತ್ತದೆ. ಆ ಶ್ಲೋಕಗಳು ಹೀಗಿವೆ–

"ಶ್ರೀದುರ್ಗ ದತ್ತ ನಿಜವಂಶ ಹಿಮಾದ್ರಿಸಾನು ಗಂಗಾ ಹ್ರದಾಶ್ರಯ ಸುತಾಮೃತಭಾನುಸೂನುಃ । ರತ್ನಾಕರೋ ಲಲಿತ ಬಂಧಮಿದಂ ವ್ಯಧತ್ತ ಚಂದ್ರಾರ್ಧಚೂಡಚರಿತಾಶ್ರಯ ಚಾರುಕಾವ್ಯಂ" "............ ಇತಿ ಶ್ರೀ ಬಾಲ ಬೃಹಸ್ಪತ್ಯನುಜೀವಿನೋ ವಾಗೀಶ್ವರಾಂಕಸ್ಯ ವಿದ್ಯಾಧಿಪತ್ಯಪರನಾಮ್ನೋ ಮಹಾಕಾವ್ಯೇ.........ಇತ್ಯಾದಿ 'ಭಾಷಾ ಷಟ್ಕೇಽಪಿಯುಸ್ಯ ಕ್ವಚಿದಪಿ ನ ಗತಾ ಭಾರತೀ ಭಾರವತ್ತ್ವಂ...... .' 'ರತ್ನಾಕರಶ್ಚ ಜ್ವಲನ ವದನವನಾ ಜಾಜ್ವಲೀತಿ

ದ್ವಿತೀಯಃ'– ತನ್ನ ಕಾವ್ಯವನ್ನು ಆದರದಿಂದ ಓದುವವನು ಅಲ್ಪಜ್ಞನಾಗಿದ್ದರೂ ಕವಿಯಾಗುವನೆಂದೂ, ಕವಿಯಾದವನು ಮಹಾಕವಿಯಾಗುವನೆಂದೂ ಪ್ರತಿಜ್ಞೆ ಮಾಡಿರುವನು. 'ಹರವಿಜಯ ಮಹಾಕವೇಃ ಪ್ರತಿಜ್ಞಾಂ ಶೃಣುತ ಕೃತಪ್ರಣಯೋ ಮಮ ಪ್ರಬಂಧೇ ಅಪಿ ಶಿಶುರಕವಿಃ ಕವಿಃ ಪ್ರಭಾವಾತ್ ಭವತಿ ಕವಿಶ್ಚ ಮಹಾಕವಿಃ ಕ್ರಮೇಣ ||' ಎಂದು ತನ್ನ ಕಾವ್ಯದ ಮಹಿಮೆಯನ್ನು ಸ್ಪಷ್ಟವಾಗಿ ಪ್ರಶಂಸಿಸಿಕೊಂಡಿರುತ್ತಾನೆ.

'ಬಾಲಬೃಹಸ್ಪತಿ' ಮಹಾರಾಜನು 9ನೆಯ ಶತಮಾನದಲ್ಲಿದ್ದನೆಂದೂ ಅವನು 'ಚಿಪ್ಪತ ಜಯಾಪೀಡ' ನೆಂದು ಪ್ರಸಿದ್ಧನಾಗಿದ್ದನೆಂದೂ ಉಕ್ತವಾಗಿದೆ. ಅದರೆ 'ರಾಜತರಂಗಿಣಿ'ಯ ಶ್ಲೋಕದಂತೆ 'ರತ್ನಾಕರ'ನು 'ಅವಂತಿವರ್ಮನ ಆಸ್ಥಾನ'ದಲ್ಲಿ (ಕ್ರಿ. ಶ. 855-884) ಆನಂದವರ್ಧನ ಮೊದಲಾದವರೊಡನೆ ಪ್ರಖ್ಯಾತನಾಗಿದ್ದನೆಂದೂ ವಿದಿತವಾಗುತ್ತದೆ. ಇದರಿಂದ 'ರತ್ನಾಕರನು' ಇಬ್ಬರು ರಾಜರ ಆಸ್ಥಾನದಲ್ಲಿದ್ದಿರಬಹುದೆಂದೂ ಊಹಿಸಲು ಸಾಧ್ಯವಾಗುತ್ತದೆ.

ಮುಕ್ತಾಕಣಃ ಶಿವಸ್ವಾಮೀ
ಕವಿರಾನಂದವರ್ಧನಃ |
ಪ್ರಥಾಂ ರತ್ನಾಕರಶ್ಚಾಗಾತ್
ಸಾಮ್ರಾಜ್ಯೇಽವಂತಿವರ್ಮಣಃ ||
(ರಾಜತರಂಗಿಣೀ 5-39)

ರತ್ನಾಕರನಿಗೆ ಅತಿಪ್ರಿಯವಾದ ವೃತ್ತವು 'ವಸಂತತಿಲಕ' ಎಂದು ಆದ್ಯ ಕ್ಷೇಮೇಂದ್ರನು ಪ್ರಶಂಸಿಸಿರುತ್ತಾನೆ.

ಪ್ರಕೃತ ಮಹಾಕಾವ್ಯದಲ್ಲಿ ಅಂಧಕಾಸುರನನ್ನು ಮಹಾದೇವನು ಸಂಹರಿಸಿದ ವಿಚಾರವು ರಮಣೀಯವಾಗಿ ವರ್ಣಿತವಾಗಿದೆ. ಶಿವಪಾರ್ವತಿ ಇಬ್ಬರೂ ವಿಹರಿಸುತ್ತಿದ್ದಾಗ ವಿನೋದಾರ್ಥವಾಗಿ ಶೈಲಜೆಯು ಈಶ್ವರನ ಕಣ್ಣನ್ನು ಮುಚ್ಚಿದಳೆಂದೂ ಆ ಸಂದರ್ಭದಲ್ಲಿ ಅಂಧಕಾಸುರನು ಈಶ್ವರನಿಂದಲೇ ಆವಿರ್ಭವಿಸಿದನೆಂದೂ ಉಕ್ತವಾಗಿದೆ. ಆದ್ದರಿಂದಲೇ ಅವನು ಅಂಧನಾದನೆಂದೂ, ಅವನನ್ನು ಈಶ್ವರನು ದಿತಿಯ ವಶಕ್ಕೆ ಕೊಟ್ಟನೆಂದೂ, ಅವಳು ತನ್ನ ಮಗನಂತೆ ಅವನನ್ನು ಬೆಳೆಸಿದಳೆಂದೂ, ಅಂಧಕನು ಉಗ್ರತಪಸ್ಸನ್ನು ಆಚರಿಸಿ ತನ್ನ ದೃಷ್ಟಿಯನ್ನು ಪಡೆದನೆಂದೂ, ಲೋಕ ಕಂಟಕನಾದ ಅವನ ಬಾಧೆಯನ್ನು ತಾಳಲಾರದೆ ಈಶ್ವರನು ಅವನನ್ನು ಸಂಹರಿಸಿದನೆಂದೂ ಉಕ್ತವಾಗಿದೆ.

ಮತ್ತೊಂದು ಉಕ್ತಿಯು ಈ ರೀತಿಯಾಗಿದೆ – ಅಂಧಕನಿಗೆ 1 ಸಾವಿರತೋಳುಗಳೂ, 1 ಸಾವಿರತಲೆಗಳೂ, 2 ಸಾವಿರ ಕಣ್ಣುಗಳೂ 2 ಸಾವಿರ ಕಾಲುಗಳೂ ಇದ್ದವೆಂದೂ ಅವನು ಚೆನ್ನಾಗಿನೋಡಬಲ್ಲವನಾಗಿದ್ದರೂ ಕುರುಡನಂತೆ ಸಂಚರಿಸುತಿದ್ದುದರಿಂದ 'ಅಂಧಕ'ನೆಂದು ಕರೆಯಲ್ಪಟ್ಟನೆಂದೂ ಹೇಳಿದೆ. ಸ ವ್ರಜತ್ಯಂಧವದ್ಯಸ್ಮಾತ್ ಆನಂದೋಽಪಿ ಹಿ ಭಾರತ | ತಮಂಧಕೋಽಯಂ ನಾಮ್ನೇತಿ ಪ್ರೋಚುಸ್ತತ್ರನಿವಾಸಿನಃ|| ಅವನು ದೇವಲೋಕದಿಂದ ಪಾರಿಜಾತವನ್ನು ಅಪಹರಿಸಲು ಯತ್ನಿಸಿದಾಗ ಈಶ್ವರನಿಂದ ಹತನಾದನೆಂದೂ ವಿದಿತವಾಗುತ್ತದೆ.

ಇನ್ನೊಂದು ಉಕ್ತಿಯ ಪ್ರಕಾರ–ಅಂಧಕನು ಈಶ್ವರನ ಮಾಲಿಕೆಯನ್ನು ಆಶ್ರಯಿಸಿ ಪಾರ್ವತಿಯೊಡನೆ ವಿಹರಿಸಲು ಪ್ರಯತ್ನಿಸುತ್ತಿದ್ದಾಗ, ಕ್ರುದ್ಧನಾದ ಶಂಕರನು ಅವನನ್ನು ನಾಶಮಾಡಲು ಉದ್ಯುಕ್ತನಾದಾಗ, ಅಸುರನು ತನ್ನ ಆಮೋಘ ಮತ್ತು ಬಲಾತ್ಕಾರ ಪೂರ್ವಕವಾದ ಪ್ರಾರ್ಥನೆಗಳಿಂದ ಅತಿ ಪ್ರಯಾಸಪಟ್ಟು ಪರಮೇಶ್ವರನನ್ನು ಒಲಿಸಿಕೊಂಡನೆಂದೂ, ಪ್ರಸನ್ನನಾದ ಪರಮೇಶ್ವರನು ಕೊನೆಗೆ ಅವನನ್ನು ತನ್ನಗಣದಲ್ಲಿ ಒಬ್ಬನನಾಗಿ ಸ್ವೀಕರಿಸಿದನೆಂದೂ ಉಕ್ತವಾಗಿದೆ.

ಈ ಕಾವ್ಯದಲ್ಲಿ ಈಶ್ವರ ಮತ್ತು ಅಂಧಕಾಸುರನ ಯುದ್ಧವರ್ಣನೆಯು ಮನೋಜ್ಞವಾಗಿದೆ.

ಈ ಮಹಾಕವಿಯು ಕಾಳಿದಾಸಾದಿಗಳಷ್ಟು ಸುವಿಖ್ಯಾತನಾಗಿಲ್ಲದಿದ್ದರೂ, ತನ್ನ ಅಪೂರ್ವವಾದ ಕೃತಿಗಳಿಂದ ಸಂಸ್ಕೃತ ಸಾಹಿತ್ಯ ಭಂಡಾರದ ನಿಧಿಯನ್ನು ಅಭಿವೃದ್ಧಿ ಪಡಿಸಿರುವನೆಂಬ ವಿಚಾರದಲ್ಲಿ ಲೇಶಮಾತ್ರವೂ ಸಂದೇಹವಿಲ್ಲ.

———

(16ನೇ ಪುಟದಿಂದ)

ತೊಂಡರಡಿಪ್ಪೊಡಿಯಾಳ್ವಾರ್ರವರಿಗೆ ಶ್ರೀ ರಂಗನಾಥನೇ ಸರ್ವಸ್ವವಾಗಿರುವುದರಿಂದ ಅವರು ವೆಂಕಟೇಶನನ್ನು ಪ್ರತ್ಯೇಕವಾಗಿ ಸ್ತೋತ್ರ ಮಾಡಿಲ್ಲ. ತಿರುಪ್ಪಾಣಿಯಾಳ್ವಾರರು 'ಅಮಲನಾದಿಪ್ಪಿರಾನ್'' ಎಂಬ ಹತ್ತು ಪಾಶುರಗಳನ್ನು ರಚಿಸಿದ್ದರೂ ಅವರು ಅದರಲ್ಲಿ ವೆಂಕಟೇಶನನ್ನು ನಾಲ್ಕು ಸಲ ಸ್ಮರಿಸಿದ್ದಾರೆ.

ಪೆರಿಯಾಳ್ವಾರ್ರವರು ಉಜ್ವಲಮಟ್ಟದ ಅನುಭಾವಿಗಳು ಅವರು ತಮಗೇ ವಿಶಿಷ್ಟವಾದ ರೀತಿಯಲ್ಲಿ ತತ್ತ್ವಹಿತ ಪುರುಷಾರ್ಥಗಳನ್ನು ವಿವರವಾಗಿ ನಿರೂಪಿಸಿದ್ದಾರೆ. ಅವರ ಪ್ರಕಾರ ಭಗವಂತನಿರುವುದು ಚೇತನರನ್ನು ಉದ್ಧಾರಮಾಡುವುದಕ್ಕಾಗಿಯೇ. ಅವನು ಪರ, ವ್ಯೂಹ, ವಿಭವ, ಅಂತರ್ಯಾಮಿ ಮತ್ತು ಅರ್ಚಾವತಾರ ರೂಪದಲ್ಲಿ ಮೈದೋರಿದ್ದಾನೆ. ಚೇತನರನ್ನು ತನಗೆ ಅಭಿಮುಖವಾಗಿ ಮಾಡಿಕೊಂಡು ಅವರಿಂದ ಸೇವೆಯನ್ನು ಕೈಗೊಳ್ಳುತ್ತಾನೆ. ಭಗವಂತನು ಹೀಗೆ ಮಾಡುತ್ತಿರುವುದನ್ನು ಪೂರ್ಣವಾಗಿ ನೋಡುವುದಕ್ಕೆ ಸಾಧ್ಯವಾಗಿರುವುದು ತಿರುಮಲೆಯಲ್ಲಿ. ಎಲ್ಲರಿಗೂ ತನ್ನ ಮಂಗಳ ಸ್ವರೂಪವನ್ನು ತೋರಿಸಿ ಎಲ್ಲರನ್ನು ತನ್ನ ಭಕ್ತರನ್ನಾಗಿ ಮಾಡಿಕೊಳ್ಳುವುದಕ್ಕಾಗಿ ತಿರುಮಲೆಯಲ್ಲಿ ನೆಲೆಸಿದ್ದಾನೆ. ಆಳ್ವಾರ್ರವರು ತಮ್ಮ ಪ್ರಬಂಧದ ಕೊನೆಯ ತಿರುಮೊಳಿಯಲ್ಲಿ ತಿರುಮಲೆಯಲ್ಲಿ ನೆಲೆಸಿದ ಶ್ರೀನಿವಾಸನ ಭೋಗ್ಯಾತಿಶಯವನ್ನೂ ಪಾವನತ್ವವನ್ನು ಅವನು ಮಾಡಿದ ಉಪಕಾರವನ್ನು ವಿಶದಪಡಿಸಿ ತನ್ನನ್ನು ಅವನಲ್ಲಿ ಸಮರ್ಪಣೆ ಮಾಡಿಕೊಂಡಿದ್ದಾರೆ.

'ಉನ್ನತವಾಗಿಯೂ ತಂಪಾಗಿಯೂ ಇರುವ ಶಿಖರಗಳುಳ್ಳ ತಿರುವೇಂಗಡನಾಯಕನಾದವನೇ, ಲೋಕವು ಬಾಳಲಿ ಎಂದು ನಿಂತ ಸ್ವಾಮಿಯೇ, ದಾಮೋದರಾ, ಚತುರಾ, ನನಗೂ ನನ್ನೊಡವೆಗೂ ನಿನ್ನ ಚಕ್ರ ಮುದ್ರೆಯನ್ನೊತ್ತಿಕೊರಿಡು ನಿನ್ನ ದಯೆಯನ್ನೇ ನಿರೀಕ್ಷಿಸುತ್ತಿದ್ದೇನೆ.' ಅವರ ಆತ್ಮಭರಸಮರ್ಪಣೆಯು ಬಹು ರಮ್ಯವಾಗಿದೆ.

ಉನ್ನೈಕ್ಕೊಂಡೆನ್ನುಳ್ ವೈತ್ತೇ‌ನ್ ಎನ್ನೈಯುಂ
ಉನ್ನಿಲಿಟ್ಟೇನ್
ಎನ್ನಪ್ಪಾ ಎನ್ನಿರುಡೀಕೇಶಾ ಎನ್ನುಯಿರ್
ಕಾವಲನೇ ॥

–ನಿನ್ನನ್ನು ತೆಗೆದು ಎನ್ನೊಳಗಿಟ್ಟುಕೊಂಡೆ, ನನ್ನನ್ನು ನಿನ್ನಲ್ಲಿಟ್ಟೆ ಎನ್ನಪ್ಪ, ನನ್ನ ಹೃಷೀಕೇಶ, ನನ್ನ ಆತ್ಮವನ್ನು ರಕ್ಷಿಸುವವನೇ.

ಪೆರಿಯಾಳ್ವಾರವರ ಸಾಕುಕುವರಿ ಆಂಡಾಳ್ ಅಯೋನಿಜೆ, ದೈವದತ್ತೆ, ಭಗವಂತನಲ್ಲಿ ವಿಶೇಷ ಪ್ರೇಮದಿಂದ ಕೂಡಿದವಳು. ಇವಳು 'ತಿರುಪ್ಪಾವೈ' ಮತ್ತು 'ನಾಚ್ಚಿಯಾರ್ ತಿರುಮೊಳಿ' ಎಂಬ ಎರಡು ಪ್ರಬಂಧಗಳನ್ನು ರಚಿಸಿದ್ದಾಳೆ. 'ತಿರುಪ್ಪಾವೈ' ಮೂವತ್ತು ಪಾಟ್ಟುಗಳಿಂದ ಕೂಡಿದೆ. 'ನಾಚ್ಚಿಯಾರ್ ತಿರುಮೊಳಿ'ಯಲ್ಲಿ ೧೪೩ ಪಾಶುರಗಳಿವೆ. ಇದು ೧೪ ತಿರುಮೊಳಿಗಳಾಗಿ ವಿಭಾಗವಾಗಿದೆ. ಇದರಲ್ಲಿ ವೆಂಕಟೇಶನನ್ನು ಕುರಿತುದು ೧೬. ಇವುಗಳಲ್ಲಿ ಆಂಡಾಳ್ ದೈವಮತ್ತಳಾಗಿ ಭಗವಂತನ ಸಂಶ್ಲೇಷವನ್ನು ಪಡೆಯುವುದಕ್ಕಾಗಿ ಹಾತೊರೆಯುತ್ತಿರುವುದು ಸ್ಪಷ್ಟವಾಗಿದೆ. ಅವುಗಳಲ್ಲಿ ಮಾದರಿಗಾಗಿ ೨ ಪಾಶುರಗಳನ್ನು ಗಮನಿಸಬಹುದು. ೮ನೆಯ ತಿರುಮೊಳಿಯಲ್ಲಿ ಆಂಡಾಳ್ ನೀಲಿಮೇಘದ ಮೂಲಕ ತನ್ನ ನಾಯಕನಿಗೆ ಸಂದೇಶವನ್ನು ಕಳುಹಿಸುತ್ತಾಳೆ. ತನ್ನ ದುರ್ದೆಶೆಯನ್ನು ಅವನಿಗೆ ತಿಳಿಯಪಡಿಸಬೇಕೆಂದು ಬೇಡುತ್ತಾಳೆ.

'ತಿರುಮಲೆಯಲ್ಲಿ ವಾಸಿಸುತ್ತ ಬಾಳುವವರಾಗಿ ಮದ ಮುದಿತವಾದ ಆನೆಯಹಾಗೆ ಮೇಲಿದ್ದ ಮೋಡಗಳೇ, ಆದಿಶೇಷನನ್ನು ಹಾಸಿಗೆಯಾಗಿ ಹೊಂದಿದ ಸರ್ವೇಶ್ವರನ ಮಾತದು ಸುಳ್ಳಾಯಿತೆ? ತಾನು ಆಶ್ರಿತರಿಗೆ ಸರ್ವಕಾಲದಲ್ಲಿಯೂ ರಕ್ಷಕನಾಗಿರುವಾಗ ಅದನ್ನು ನೆನೆಯದೆ ಅನನ್ಯಾರ್ಹಳೂ ಗೌರವಸ್ಥ ವಂಶದಲ್ಲಿ ಜನಿಸಿದವಳೂ ಆದ ಹೆಣ್ಣೊಂದನ್ನು ನೋಯಿಸಿದನೆಂದು ಲೋಕದವರು ಅನ್ನುವುದಿಲ್ಲವೇ? ಈ ದುರವಸ್ಥೆಯನ್ನು ಹೋಗಲಾಡಿಸಬೇಕಾದರೆ ನೀವು ಅವನಿಗೆ ಸರಿಯಾಗಿ ಹೇಳಿ ಪರಿಹರಿಸಿ.'

ಮತ್ತೊಂದು ಪಾಶುರದಲ್ಲಿ ನಾಯಕನು ಎಂದಿಗೂ ಸುಳ್ಳಾಡುವವನಲ್ಲವೆಂದೂ, ಹಾಗಿಲ್ಲದಿದ್ದರೂ ತಾನು ಪೆರಿಯಾಳ್ವಾರ್ರವರ ಮಗಳಾಗಿರುವುದರಿಂದ ದೇವನು ತನ್ನನ್ನು ಅವನ ಪಾದದಡಿಯಲ್ಲಿ ಸೇರಿಸದಿರುವುದಿಲ್ಲವೆಂದೂ ಮನಸ್ಸಿಗೆ ಧೈರ್ಯವನ್ನು ತೆಗೆದುಕೊಳ್ಳುತ್ತಾಳೆ.

'ಹಾಡುವ ಕೋಗಿಲೆಗಳೇ, ಕರ್ಣಕಠೋರವಾದ ಇದು ಎಂತಹ ಹಾಡು. ವಿಲಕ್ಷಣವಾದ ತಿರುಮಲೆಯಲ್ಲಿ ನೆಲೆಸಿರುವ ವೆಂಕಟನಾಯಕನು ನನ್ನ ವಿಷಯದಲ್ಲಿ ನಿಮ್ಮ ಹಾಡು ಕೇಳುವುದಕ್ಕೆ ಅನುಕೂಲವಾದ ಬಾಳ್ವೆಯನ್ನು ಕೊಡುವವನೇ ಆದರೆ ನೀವು ನನ್ನ ಬಳಿ ಬಂದು ಹಾಡಿ. ಆಡುವ ಗರುಡಧ್ವಜವುಳ್ಳವನು ನನ್ನ ಬಳಿ ಬಂದು ಕೃಪೆ ಮಾಡಿ ಸಂಶ್ಲೇಷಿಸಿದುದೇ ಆದರೆ ನಿಮ್ಮನ್ನು ಕೂಗಿ ಕರೆದು ನಿಮ್ಮ ಹಾಡನ್ನು ನಾನು ಕೇಳುವೆ.'

ನಮ್ಮಾಳ್ವಾರ್ರವರು 'ಪೆರಿಯ ತಿರುವಂದಾದಿ' 'ತಿರುವಿರುತ್ತಂ' 'ತಿರುವಾಶರಿಯಂ' 'ತಿರುವಾಯ್‌ಮೊಳಿ' ಎಂಬ ನಾಲ್ಕು ಪ್ರಬಂಧಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ಒಟ್ಟು ೧೨೯೬ ಪದ್ಯಗಳಿವೆ. ಇವುಗಳಲ್ಲಿ ೪೫ ಪಾಶರಗಳು ವೆಂಕಟೇಶನಿಗೂ ತಿರುಮಲೆಗೂ ಸಂಬಂಧಿಸಿದುದು. ಅವರಿಗೆ ವೆಂಕಟೇಶನು ಸರ್ವಸ್ವ. ಅವನು ತಂದೆಯ ತಂದೆ. ಅವನನ್ನು ಚಿಂತಿಸುವವರಿಗೆ ರೋಗ, ಮುಪ್ಪು, ಪುನರ್ಜನ್ಮಗಳಿಲ್ಲ. ಅವನು ಆದಿಪುರುಷ, ಬೆಟ್ಟವನ್ನು ಎತ್ತಿ ಮಳೆಯಿಂದ ರಕ್ಷಿಸಿದವನು. ಸರ್ವಲೋಕ ಭಕಕ, ಅಪಾರ ಕೀರ್ತಿಯುಳ್ಳವನು. ಸ್ವಾಭಾವಿಕವಾದ ಗುಣಗಣಗಳಿಂದ ತೇಜೋಮೂರ್ತಿಯಾದವನು. ಮಹಾ ಮಹಿಮೆಯುಳ್ಳವನು. ಭಕ್ತನಿಗೆ ಪ್ರಾಣರೂಪನಾಗಿರುವವನು. ಸಕಲ ಲೋಕ ತಿಲಕಪ್ರಾಯನಾಗಿ ನಿಂತಿರುವ ವೆಂಕಟೇಶ ಪ್ರಬಲವಾದ ರಾಕ್ಷಸ ಕುಲವನ್ನು ನಾಶಪಡಿಸಿದವನು. ಪ್ರಜ್ವಲಿಸುವ ಚಕ್ರವನ್ನು ಧರಿಸಿರುವವನು. ವಿಕಸಿತೋಜ್ವಲ ಪುಂಡರೀಕ ಶೋಭಿತವಾದ ವೆಂಕಟಾದ್ರಿಯಲ್ಲಿ ವಾಸಮಾಡುವವನು. ಅವನ ಪಾದವನ್ನು ಸೇರುವ ಪ್ರಕಾರವನ್ನು ಅವನೇ ತಿಳಿಸಬೇಕು. ಅವನು ನೀಲಮೇಘಶ್ಯಾಮ, ಮಾಯಾಚೇಷ್ಟಿತ, ಅಮೃತಪ್ರಾಯ, ಮಣಿಕನಕ ಮುಕ್ತಾದಿಗಳಿಂದ ವಿರಾಜಿತವಾಗಿರುವ ವೆಂಕಟಾದ್ರಿಯ ಒಡೆಯ. ಲೋಕವನ್ನು ಪೀಡಿಸುವ ರಾಕ್ಷಸರ ಸಂಹಾರಕ್ಕಾಗಿ ಬಾಣವರ್ಷಮಾಡುವ ಶಾರ್ಙ್ಗಧಾರಿ, ದೇವಮುನಿಗಣಾರ್ಚಿತ ವೆಂಕಟಾದ್ರಿಯ ಈಶ. ಸಪ್ತಸಾಲಚ್ಛೇದನಮಾಡುವುದಕ್ಕಾಗಿ ಧನಸ್ಸನ್ನು ಧರಿಸಿದವನು. ಯಮಳಾರ್ಜುನ ಭಂಗಮಾಡಿದ ಜಗತ್ಕಾರಣ ಭೂತ, ನೀಲಮೇಘಗಳಂತಿರುವ ಆನೆಗಳು ಗುಂಪಾಗಿ ಸೇರುವ ವೆಂಕಟಾದ್ರಿಯ ಒಡೆಯ, ನಿನ್ನ ಪಾದಗಳನ್ನು ಸೇರುವುದೆಂದು? ತ್ರಿಲೋಕಗಳನ್ನು ಅಳೆದ ನಿನ್ನ ಪಾದವನ್ನು ನೋಡುವುದೆಂದು? ಸಶರೀರವಾಗಿ ನಿನ್ನ ಪಾದಗಳನ್ನು ಸೇರುವುದೆಂದು? ನಿರಂತರಾನುಭವ ಮಾಡಲು ಯೋಗ್ಯನಾದ ಭೋಗ್ಯಾಮೃತ ಸ್ವರೂಪ. ಗರುಡಧ್ವಜ, ಬಿಂಬಾಧರ, ಪಾಪಧ್ವಂಸಕವಾದ ಔಷಧಿಪ್ರಾಯ, ನಿನ್ನ ದರ್ಶನಕ್ಕೆ ವಿಳಂಬಮಾಡಲಾರೆ. ಅನಾಶ್ರಿತರಿಗೆ ದುರ್ಲಭ, ಆಶ್ರಿತರಿಗೆ ಸುಲಭ. ಚಿಂತಾಮಣಿಗಳಿಂದ ಶೋಭಿತನಾಗಿ ರಾತ್ರಿಯೂ ಹಗಲಂತೆ ಪ್ರಕಾಶಿಸುತ್ತಿರುವ ತಿರುವೆಂಕಟಾಧೀಶ, 'ಒಂದು ಕ್ಷಣವೂ ನಿನ್ನನ್ನಗಲಿರಲಾರೆ' ಎಂಬ ಲಕ್ಷ್ಮಿಯ ಪ್ರಾಣವಲ್ಲಭ, ಪಕ್ಷಾಂತರವಿಲ್ಲದ ದಾಸನಾದ ನಾನು ನಿನ್ನ ಪಾದಗಳನ್ನಾಶ್ರಯಿಸಿದ್ದೇನೆ.

ಇದುವರೆಗೆ ದಿವ್ಯಪ್ರಬಂಧಗಳಲ್ಲಿ ಪ್ರಕಾಶಿತವಾದ ತಿರುವೆಂಕಟೇಶನ ಪರಿಚಯ ಏಕದೇಶ ಮಾತ್ರ. ಆದರ ಪೂರ್ಣಪರಿಚಯವನ್ನು ಪಡೆಯಲು ಆ ದಿವ್ಯಪ್ರಬಂಧಗಳ ಸಾಗರವನ್ನೇ ಪಾನ ಮಾಡಿ ಆನಂದಿಸಬೇಕು.

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಲ ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | ಶುಕ್ರವಾರಗಳಲ್ಲಿ | |
|---|---|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 | ಪ್ರಾ 6–00 | ಪ್ರಾ 5–30 | ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 | ಪ್ರಾ 6–30 | ಪ್ರಾ 6–00 | ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 | ಪ್ರಾ 7–00 | ಪ್ರಾ 6–30 | ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 | ಪ್ರಾ 7–30 | ಪ್ರಾ 7–00 | ಪ್ರಾ 7–30 |
| ಸರ್ವದರ್ಶನ | ಪ್ರಾ 7–30 | ಪ್ರಾ 10–00 | *ಅಭಿಷೇಕ ಪ್ರಾ 7–30 | ಪ್ರಾ 8–30 |
| | | | ಸಮರ್ಪಣ ಪ್ರಾ 8–30 | ಪ್ರಾ 9–30 |
| 2ನೇ ಅರ್ಚನೆ | | | | |
| 2ನೇ ಗಂಟೆ | ಪ್ರಾ 10–00 | ಪ್ರಾ 10–30 | ಪ್ರಾ 9–30 | ಪ್ರಾ 10–30 |
| *ಆರ್ಜಿತ ಕಲ್ಯಾಣೋತ್ಸವ | | | ಪ್ರಾ 10–30 | ಮ 12–00 |
| ಸರ್ವದರ್ಶನ | ಪ್ರಾ 10–30 | ಸಂ 6–30 | ಪ್ರಾ 10–30 | ಸಂ 6–30 |
| ರಾತ್ರಿ ಕೈಂಕರ್ಯ | | | | |
| ರಾತ್ರಿ ಗಂಟೆ | ಸಂ 6–30 | ರಾ 7–00 | ಸಂ 6–30 | ರಾ 7–00 |
| ಸರ್ವದರ್ಶನ | ರಾ 7–00 | ರಾ 8–45 | ರಾ 7–00 | ರಾ 8–45 |
| ಏಕಾಂತ ಸೇವೆ | ರಾ 8–45 | ರಾ 9–00 | ರಾ 8–45 | ರಾ 9–00 |

| | |
|---|---|
| *ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ವರ್ತನೆ | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

## ದಿವ್ಯ ಪ್ರಬಂಧದಲ್ಲಿ ತಿರುಪತಿ ಶ್ರೀನಿವಾಸರನ್ನು ಕೊಂಡಾಡಿರುವ ಪದ್ಯಗಳ ವಿವರ

ಪೊಯ್ಗೈ ಆಳ್ವಾರ್–ಮುದಲ್ ತಿರುವಂದಾದಿ ೨೬, ೩೭, ೩೮, ೩೯, ೪೦, ೬೮, ೭೬, ೭೭, ೮೨ ಮತ್ತು ೯೯.

ಪೂದತ್ತಾಳ್ವಾರ್ – ಇರಂಡಾಂ ತಿರುವಂದಾದಿ ೨೫, ೨೬, ೩೩, ೪೫, ೪೬, ೫೩, ೫೪, ೭೨, ೭೫.

ಪೇಯಾಳ್ವಾರ್ – ಮೂನ್ರಾಂ ತಿರುವಂದಾದಿ ೧೪, ೨೬, ೩೦, ೩೨, ೩೯, ೪೦, ೪೫, ೫೮, ೬೧, ೬೨, ೬೩, ೬೮, ೬೯, ೭೦, ೭೧.

ತಿರುಮೊಳಿಶೈಆಳ್ವಾರ್ – ನಾನ್ಮುರ್ಹ ತಿರುವಂದಾದಿ ೩೪, ೩೯ ರಿಂದ ೪೮, ೯೦.

ತಿರುಚ್ಚಂದ ವಿರುತ್ತಂ. ೪೮, ೬೦, ೮೧.

ನಮ್ಮಾಳ್ವಾರ್– ಪೆರಿಯ ತಿರುವಂದಾದಿ ೬೮.

ತಿರುವಿರುತ್ತಂ ೮-೧೦, ೧೫, ೩೧-೫೦, ೬೦ ೬೭, ೮೧.

ತಿರುವಾಯ್ ಮೊಳಿ ೧-೮-೩, ೨-೬-೯, ೧೦, ೨-೭೧, ೩-೩ (೧೦) ೩-೫-೮, ೩-೯-೧, ೪-೫-೧, ೬-೬ (೧೧), ೬-೯-೫, ೬-೧೦, ೮-೨-೧, ೯-೩-೮, ೧೦-೫-೬, ೧೦-೭-೯.

ಕುಲಶೇಖರಾಳ್ವಾರ್ – ಪೆರುಮಾಳ್ ತಿರುಮೊಳಿ ೪ (ಪೂರ್ತ)

ಪೆರಿಯಾಳ್ವಾರ್ – ಪೆರಿಯಾಳ್ವಾರ್ ತಿರುಮೊಳಿ ೧-೫-೩, ೧-೯-೮, ೨-೬-೯, ೧-೭-೩, ೨-೯-೬, ೩-೩-೪, ೫-೪-೧.

ಆಂಡಾಳ್–ನಾಚ್ಚಿಯಾರ್ ತಿರುಮೊಳಿ ೧-೧, ೧-೩, ೪-೨, ೫-೨, ೮-(೧೦) ೧೦-೫, ೧೦-೮

ತಿರುಮಂಗೈಯಾಳ್ವಾರ್–ಪೆರಿಯ ತಿರುಮೊಳಿ ೧-೮ ರಿಂದ ೧೦, ೨ ೧ (೪೦) ೩-೫-೯, ೪-೩-೮, ೪-೩-೫, ೪-೩-೪, ೫-೫-೧, ೫-೬-೭, ೬-೮-೧ ೭-೧-೭, ೬-೩-೫, ೭-೧೦-೩, ೮-೨-೩, ೯-೭-೪ ೯-೯-೯, ೧೦-೧-೨ ೧೦-೯-೨, ೧೦-೧೦-೫ ೧೧-೩-೩, ೧೧-೫-೧೦.

| | |
|---|---|
| ತಿರುಕುರುಂದಾಂಡಗಮ್ | (೭) |
| ತಿರುನೆಡುದಾಂಡಗಂ | (೬) |
| ಶಿರಿಯ ತಿರುಮಡಲ್ | (೩೯) |
| ಪೆರಿಯತಿರುಮಡಲ್ | (೬೨) |

---

ಈ ಪ್ರಬಂಧವನ್ನು ಸಿದ್ಧಪಡಿಸುವುದರಲ್ಲಿ ನಾನ ಡಾ॥ ಎಸ್. ಎಸ್. ಅನಂತರಂಗಾಚಾರ್ಯರ 'ಆಳ್ವಾರುಗ ಕೃತಿ ಪರಿಚಯ' ಎಂಬ ಗ್ರಂಥದಿಂದ ಉಪಕೃತನಾಗಿದ್ದೇ

## ಪುಸ್ತಕ ವಿಮರ್ಶೆ

# ಭಾಗವತ ಸಾರೋದ್ಧಾರ ಅಧ್ಯಯನ

ಶ್ರೀಮದ್ಭಾಗವತ ಸಾರೋದ್ಧಾರ ಅಧ್ಯಯನಃ ಆರ್. ಎಚ್. ಕುಲಕರ್ಣಿ. ಎಂ, ಎ; ಬಿ ಎಡ್; ಸಾಹಿತ್ಯಸದನ, ಎಂ. ಎಸ್. ಕೆ. ಮಿಲ್ ರೋಡ್, ಗುಲ್ಬರ್ಗ. 585102
ಬೆಲೆ: ರೂ 15–00 ಪುಟಗಳು 268

ಶ್ರೀಮದ್ಭಾಗವತವು ಅಷ್ಟಾದಶ ಪುರಾಣಗಳಲ್ಲೊಂದು, "ಅಷ್ಟಾದಶಸಾಹಸ್ರೀ'' ಎಂದರೆ ೧೮,೦೦೦ ಶ್ಲೋಕಗಳಿಂದ ಕೂಡಿದ್ದು, ಸುಕುಮಾರಮತಿಗಳಿಗೆ ಸುಲಭದಲ್ಲಿ ಅರ್ಥವಾಗದಂತಿದೆ. ಸಂಸ್ಕೃತ ಭಾಷೆಯಲ್ಲಿರುವ ಈ ಕೃತಿ ದ್ವಾದಶಸ್ಕಂಧಗಳಿಂದ ಕೂಡಿದ್ದು, ಭಾಗವತ ಧರ್ಮದ ಕೈಗನ್ನಡಿಯಾಗಿದೆ. ಭಗವಂತನ, ಭಗವದ್ಭಕ್ತರ ಲೀಲಾ ಮಾಹಾತ್ಮ್ಯಾದಿಗಳನ್ನು ಬೋಧಿಸುತ್ತದೆ. ವೇದಾಂತದ ಗಹನ ವಿಚಾರಗಳೂ ಇದರಲ್ಲಿ ಹಾಸು ಹೊಕ್ಕಾಗಿವೆ. ಪಂಡಿತರಿಗೂ ಕೆಲವೊಮ್ಮೆ ಸವಾಲಾಗಿ ನಿಲ್ಲುವ ನಿಗೂಢ ಪ್ರಶ್ನೆಗಳು ಇದರಲ್ಲಿವೆ, ಆದ್ದರಿಂದಲೇ "ಪ್ರಜ್ಞಾವತಾಂ ಭಾಗವತೇ ಪರೀಕ್ಷಾ" ಎಂಬ ಮಾತು ಹುಟ್ಟಿಕೊಂಡಿದೆ. ಭಾಗವತವನ್ನು ಕುರಿತು

ಕಾಲವ್ಯಾಲ ಮುಖಗ್ರಾಸ
ತ್ರಾಸ ನಿರ್ಣಶ ಹೇತವೇ |
ಶ್ರೀಮದ್ಭಾಗವತಂ ಶಾಸ್ತ್ರಂಕಲೌ
ಕೀರೇಣ ಭಾಷಿತಮ್ ||

"ಶ್ರೀಮದ್ಭಾಗವತೀ ವಾರ್ತಾಸುರಾಣಮಪಿ ದುರ್ಲಭಾ''. ಆದ್ದರಿಂದಲೇ–"ಶ್ರೀಮದ್ಭಾಗವತಂ ನಾಮ ಪುರಾಣಂ ಲೋಕವಿಶ್ರುತಮ್'' ಎಂದು ಕೊಂಡಾಡಿದರು.

ಯದುತ್ತಮಶ್ಲೋಕ ಯಶೋನುಗಾಯನವು ಭಾಗವತದುದ್ದಕ್ಕೂ ಇದೆ–ಆದರೆ " ಸ್ವಲ್ಪಶ್ಚಕಾಲಃ ಬಹವಶ್ಚ ವಿಘ್ನಾಃ " ಎಂದಂತೆ ಈಗಿನ ಈ ಅವಿಶ್ರಾಂತ ದುಡಿಮೆಯ ದಿನಗಳಲ್ಲಿ ಗಹನ ವಿಚಾರಗಳತ್ತ ಚಿಂತಿಸಲು ಬಿಡುವು ಬಲವು ಎಲ್ಲಿದೆ? ಹಾಗಾಗಿ ತಸ್ಮಾತ್ತು ಸಾರಂ ಸಮುಪಾಸಿತವ್ಯಂ–ಎಂಬ ನಿಯಮವನ್ನನುಸರಿಸಿ ಲೋಕೋದ್ಧಾರಕ್ಕಾಗಿ ಶ್ರೀವಿಷ್ಣುತೀರ್ಥರು, ಸಂಸ್ಕೃತದಲ್ಲಿ 'ಶ್ರೀಮದ್ಭಾಗವತ ಸಾರೋದ್ಧಾರ' ಗ್ರಂಥವನ್ನು ಸಂಗ್ರಹಿಸಿ ಬರೆದರು. ಮೂವತ್ತು ಪ್ರಕರಣಗಳಲ್ಲಿ ೩೬೪ ಶ್ಲೋಕಗಳನ್ನಾಯ್ದುಕೊಂಡು "ಆಪತ್‌ಕಾಲದಲ್ಲಿ ಅಲ್ಪಮತಿಗಳಿಗೆ ನಿರಂತರ ಪಾರಾಯಣ ಮಾಡುವುದಕ್ಕಾಗಿ" ರಚಿಸಿದರು. ಮತ್ತೂ ಭಾಷಾಕ್ಲಿಷ್ಟತೆ ಉಳಿಯಿತು. ಅನೇಕರು ಕನ್ನಡದಲ್ಲಿ ಅರ್ಥವನ್ನು ಬರೆದರೂ, ಸೂಕ್ಷ್ಮವಿಚಾರಗಳು ದುರವಗಾಹಗಳಾಗಿಯೇ ಉಳಿದುವು. 'ಸುಲಭವಹಕನ್ನಡದನುಡಿ' ಇನ್ನೂ ಸುಲಭವಹ ರೀತಿಯಿಂದ ಈ ಗ್ರಂಥದಲ್ಲಿ "ಭಾಗವತಸಾರವು" ಒಡಮೂಡಿ ಬಂದಿದೆ. ಶ್ರೀಯುತ ಕುಲಕರ್ಣಿಯವರು ಈ ನಿಟ್ಟಿನಲ್ಲಿ ಭಕ್ತರ ಪ್ರಶಂಸಾ ಪಾತ್ರರು, ಈ ಗ್ರಂಥದ ಹೆಗ್ಗಳಿಕೆ ಇಲ್ಲಿದೆ. ಗ್ರಂಥದ ಆದಿಯಲ್ಲಿರುವ 'ವಿಜ್ಞಾಪನೆ'ಯಲ್ಲಿ ಗ್ರಂಥದ ಉದ್ದೇಶ, ಗುರಿಗಳನ್ನು ಎತ್ತಿ ತೋರಿಸಿದ್ದಾರೆ. ಪ್ರತಿ ಪ್ರಕರಣದ ಮೊದಲಲ್ಲಿ ಬರುವ ವಿಷಯ ಪ್ರವೇಶಿಕೆ, ಅನಂತರ ಸಂಸ್ಕೃತ ಶ್ಲೋಕಗಳಿಗೆ ಬರೆದ ಸರಳ ಕನ್ನಡ ತಾತ್ಪರ್ಯ, ಪ್ರತಿ ಪ್ರಕರಣದ ಕೊನೆಯ ಸಾರಾಂಶ–ಹೀಗೆ ಈ ಮುಪ್ಪುರಿಗೊಂಡ ಪ್ರವಚನವಾಗಿದ್ದಾರೆ. ತ್ರಿವೇಣೀ ಸಂಗಮದಂತೆ ಪಾವನವಾಗಿದೆ; ಜಿಜ್ಞಾಸುಗಳಿಗೆ ದಾರಿದೀಪವಾಗಿದೆ. ದೀಪಧಾರಿಯಂತೆ ಅಲ್ಲಲ್ಲಿ ವಿಶೇಷ ವಿವರಣೆ ಟಿಪ್ಪಣಿಗಳು–ಉದಾಹರಣೆಗೆ, "ಧರ್ಮೋಪದೇಶ ಪ್ರಕರಣ, ಪುಟ 156–183 ವರೆಗಿನ ವಿವರಣೆ ಅತ್ಯಂತ ಉಪಯುಕ್ತವಾಗಿದೆ. ಭಾಗವತ ಧರ್ಮದ ತಿರುಳನ್ನು ಕುರಿತ ಅನ್ಯಗ್ರಂಥಗಳಿಂದ ಆಯ್ದುಕೋದ ನುಡಿಮುತ್ತುಗಳೂ ಪ್ರಕೃತಾರ್ಥಪೋಷಕವಾಗಿದ್ದು ಸುಸಂಗತ ವಿವರಣೆಗೆ ಮೆರುಗನ್ನಿತ್ತಿವೆ. ಇದರಿಂದಲೂ ಈ ಕೃತಿಯ ಬೆಲೆಹೆಚ್ಚಿದೆ. ಧರ್ಮವಿಚಾರ ಎಂದಾಕ್ಷಣ ಹಿಂಜರಿಯುವವರಿಗೂ ಈ ಕೃತಿ, ತಿಳಿಗನ್ನಡದಲ್ಲಿ ಸುಲಲಿತ ಬೋಧೆ. ಮಾರ್ಗದರ್ಶನಗಳನ್ನು ಕೊಡಬಲ್ಲದು. ಪರಬ್ರಹ್ಮಜಿಜ್ಞಾಸುಗಳಿಗೆ ಇದು 'ಅಜಿಹ್ಮರಾಜಪದ್ಧತಿಃ' ಎಂದರೆ ಸತ್ಯಕ್ಕೆದೂರವಾಗದು. ಭಗವಾನ್ ಬಾದರಾಯಣ, ಆರಣ್ಯಕಾಚಾರ್ಯ ಕುಲಕರ್ಣಿ–ಹೀಗೆ ಈ ಮೂರು ನಿಟ್ಟಿನ ಭಟ್ಟಿ ಇಳಿಸಿದ ಸಾರಘನೀಭೂತ ಭಾಗವತಧರ್ಮ ಈ ಕೃತಿಯಲ್ಲಿ ಒಡಮೂಡಿದೆ ಎಂದು ಧಾರಾಳವಾಗಿ ಹೇಳಬಹುದು. ಧರ್ಮ ರಹಸ್ಯದ ಬಗ್ಗೆ ಇಂತಹ ಕೃತಿಗಳು ತಿಳಿಗನ್ನಡದಲ್ಲಿ ಇನ್ನಷ್ಟು ಬರುವ ಅಗತ್ಯ ಇದೆ.

ಪುಸ್ತಕದ ಮುದ್ರಣ ವಿನ್ಯಾಸ ಸುಂದರವಾಗಿದ್ದರೂ ಮುದ್ರಣ ದೋಷ–ವಿಶೇಷವಾಗಿ ಸಂಸ್ಕೃತ ಶ್ಲೋಕಗಳಲ್ಲಿ – ಓದುಗನಿಗೆ ತೊಂದರೆಯನ್ನೀಯುತ್ತದೆ. ಅರ್ಥವನ್ನು ಮಾಡುವಾಗ ಶುದ್ಧಪಾಠವಾವುದು ಎಂದು ಆಲೋಚಿಸುವಂತಾಗುತ್ತದೆ. ಸಂಸ್ಕೃತವರಿಯದ ಓದುಗ ತಪ್ಪುವ ಸಂಭವವಿದೆ. ಈದೋಷ ಇಲ್ಲದಿರುತ್ತಿದ್ದರೆ ಕೃತಿ ಇನ್ನೂ ಸುಶೋಭಿತವಾಗುತ್ತಿತ್ತು ಎನ್ನುವುದು ನಿಃಸಂದೇಹದ ಮಾತು.

ಶ್ರೀ ತಿರುಮಲೆ ತಿರುಪತಿ ದೇವಸ್ಥಾನದ ಸಹಾಯ ಪಡೆದು ಈ ಗ್ರಂಥವನ್ನು ಮುದ್ರಿಸಲಾಗಿದೆ. ★

**ಶ್ರೀ ಕೆ. ಸುಬ್ರಹ್ಮಣ್ಯ ಭಟ್ಟ**
ಎಂ. ಎ; ಬಿ.ಇಡಿ. ವಿದ್ವಾನ್



ಮಾರಾಟಕ್ಕೆ ಸಿದ್ಧವಾಗಿವೆ
ತಾಮ್ರ ಚಿತ್ರಪಟಗಳು
ಶ್ರೀ ವೆಂಕಟೇಶ್ವರಸ್ವಾಮಿ
ಹಾಗೂ
ಶ್ರೀ ಪದ್ಮಾವತೀ ಅಮ್ಮನವರ
ಆಕರ್ಷಕ ತಾಮ್ರಚಿತ್ರಗಳ ಫಲಕಗಳು
ಸುಲಭ ಬೆಲೆಯಲ್ಲಿ ದೀರ್ಘಕಾಲ
ಬಾಳಿಕೆ ಬರುವ ಸುಂದರ ತಾಮ್ರ ಚಿತ್ರಗಳು
ಎಲ್ಲ ತಿ. ತಿ. ದೇ. ಪ್ರಕಟನ ಮಾರಾಟ ಮಳಿಗೆಗಳಲ್ಲೂ
ದೊರೆಯುತ್ತವೆ.

# ಗಿರಿಜಾಕಲ್ಯಾಣದ ಗಿರಿಜೆ

**ಕೆ. ರಮಾನಂದ**

ಮಹಾಕವಿ ಹರಿಹರನ 'ಗಿರಿಜಾಕಲ್ಯಾಣ'ದ ನಾಯಕಿ ಗಿರಿಜೆಯಾಗಿದ್ದಾಳೆ. ಗಿರಿಜೆಯ ಬಾಳ ಕಥೆ ಈ ಕಾವ್ಯದ ತುಂಬಾ ಹರಡಿಕೊಂಡಿದೆ. ಹಾಗೆ ನೋಡಿದರೆ ಗಿರಿಜೆಯನ್ನು ಕುರಿತಂತೆ ಕಾವ್ಯವನ್ನು ರಚಿಸಿದವರಲ್ಲಿ ಹರಿಹರನೇ ಮೊದಲಿಗನಲ್ಲ. ಗಿರಿಜೆಯ ಕಲ್ಯಾಣವನ್ನೇ, ವಸ್ತುವಾಗಿ ತೆಗೆದುಕೊಂಡು. ಹಿಂದೆಯೇ ಕಾಳಿದಾಸನು 'ಕುಮಾರಸಂಭವ' ಕಾವ್ಯವನ್ನು ರಚಿಸಿದ್ದನು. ಅಷ್ಟೇ ಅಲ್ಲ ರಾಮಾಯಣ, ಮಹಾಭಾರತ, ಶಿವಪುರಾಣ, ಸೌರಪುರಾಣ, ಮತ್ಸ್ಯಪುರಾಣ, ಬ್ರಹ್ಮಪುರಾಣ, ಸೌಂದರ್ಯ ಪುರಾಣಗಳಲ್ಲೂ ಗಿರಿಜಾಕಲ್ಯಾಣದ ಕಥೆ ಉಲ್ಲೇಖಗೊಂಡಿದೆ. ಕುಮಾರವ್ಯಾಸನ 'ಭಾರತದ' ಇಂದ್ರಕೀಲದಲ್ಲಿ ಬರುವ ಗಿರಿಜೆ, ಷಡಕ್ಷರದೇವನ 'ರಾಜಶೇಖರವಿಳಾಸ, ಶಬರಶಂಕರವಿಳಾಸ, ವೃಷಭೇಂದ್ರ ವಿಜಯಗಳಲ್ಲಿ ಚಿತ್ರಿತವಾಗಿರುವ ಗಿರಿಜೆಯ ಪಾತ್ರ, ದೇವೀಸ್ತುತಿ ಅಷ್ಟಕಗಳಲ್ಲಿ ಪ್ರಶಂಸಿಸಲ್ಪಟ್ಟಿರುವ ಗಿರಿಜಾದೇವಿ ಎಲ್ಲರನ್ನೂ ಹರಿಹರನ ಗಿರಿಜೆ ಬಹುಮಟ್ಟಿಗೆ ಹೋಲುತ್ತಾಳೆ ಎಂದು ಹೇಳಬಹುದು.

ಶಿವಭಕ್ತನಾದ ಹರಿಹರ, ಗಿರಿಜೆಯ ಪಾತ್ರವನ್ನು ತನ್ನ ಕಾವ್ಯದಲ್ಲಿ ಬಹಳ ಸೊಗಸಾಗಿ ನಿರೂಪಿಸಿದ್ದಾನೆ. ಕವಿಯ ಭಕ್ತಿ ಭಾವನೆ ಗಿರಿಜೆಯಲ್ಲೇ ಮನೆಮಾಡಿದೆಯೇನೋ ಎಂದು ತೋರುವಂತಿದೆ. ಹರಿಹರನ ಗಿರಿಜೆ ದೈವೀ ಪಾತ್ರವಾದರೂ ಮಾನವರಲ್ಲಿರಬಹುದಾದ ರೋಷ, ಛಲ, ಪ್ರೀತಿ, ಕರುಣೆ,– ಈ ಎಲ್ಲಾ ಅಂಶಗಳನ್ನೂ ಆ ಪಾತ್ರಕ್ಕೆ ಕವಿ ಆರೋಪಿಸಿದ್ದಾನೆ.

"ಪರಮೇಶ್ವರಾಂಘ್ರಿ ಸರಸಿಜ ಮಧುವ್ರತ ದಿಗಂತ" ಕೀರ್ತಿಯುತನಂತೆ ಪರ್ವತರಾಜ. ಮಗಳಿಗಾಗಿ ಹಂಬಲಿಸಿದ ಮಹಾರಾಣಿ ಮೈನಾದೇವಿ. ಇವರಿಬ್ಬರ ಮಗಳಾಗಿ ಹುಟ್ಟಿದಳು ಗಿರಿಜೆ. ಗಿರಿಜೆಯನ್ನು ಕವಿ ವರ್ಣಿಸಿರುವ ಸೊಬಗಂತೂ ಓದಿದರೇ ತಿಳಿಯುತ್ತದೆ.

"ಪಾವಕನ ತೇಜದಂತೆ, ಚಂದ್ರನ ಬಲದಂತೆ. ದಿನನೇಂದ್ರನ ಕಿರಣದಂತೆ, ಪರಮಾತ್ಮನ ಪರಿಣಾಮದಂತೆ. ಸಲ್ಲಕ್ಷಣದ ಲಾವಣ್ಯದಂತೆ, ಬೆಳ್ದಿಂಗಳ ಬಣ್ಣದಂತೆ, ಶಿವ ಜ್ಞಾನದ ದೇಹದಂತೆ, ಸಾಲೋಕ್ಯದ ಸವಿಯಂತೆ, ಮಕರಧ್ವಜನ ಮದದಂತೆ, ಸಾಯುಜ್ಯದ ನಿಲುವಿನಂತೆ, ಶಿವನ ಸುಖದಂತೆ, ಮುಕ್ತಿಯ ಮುಖದಂತೆ, ಕಾಂತಿಯ ಲತೆಯಂತೆ, ನಿರುಪಾಧ್ಯಕ ಜ್ಯೋತಿಯಂತೆ, ಸಾಮರ್ಥ್ಯದ ಬೀಜದಂತೆ … ". ಲೋಕಮಾತೆಯಾದ ಗಿರಿಜೆ ಮಗುವಾಗಿದ್ದಾಗ ಅವಳನ್ನು ಒಂದು ನಿಮಿಷವೂ ಪರ್ವತರಾಜ ಬಿಡುತ್ತಿರಲಿಲ್ಲವಂತೆ. ಅವನ ಪ್ರೀತಿಯ ರಸದ ಊಟೆ ಉರುಬಿ ಉಕ್ಕಿ ಹರಿಯುತ್ತಿದ್ದಿತು. ಅದೇನು ಭಾಗ್ಯಶಾಲಿ ಅವನು! ಅವನು ಗಿರಿಜೆಯನ್ನು ಕರೆಯುವುದು ಎಷ್ಟು ಚೆಂದ?

"ಮಾಣಿಕವೆ, ಮೌಕ್ತಿಕವೆ, ಮತ್ಪ್ರಾಣವೆ, ಪೊನ್ನೊರೆಯೆ, ಪರುಷವೆ, ಮುಕ್ತಿಯ ನಿರ್ಮಾಣವೇ"–ಹೌದು! ಪರ್ವತರಾಜ, ಮೈನಾದೇವಿಯರಿಗೆ ಗಿರಿಜೆ ಮುಕ್ತಿಯನ್ನು ಸಾಧಿಸಿಕೊಡುವ ಹಂತವಾಗಿದ್ದುದರಲ್ಲಿ ಆಶ್ಚರ್ಯವೇನು? ಬಾಲಕಿಯಾದಾಗಿನಿಂದಲೂ ಗಿರಿಜೆಗೆ ಶಿವನಲ್ಲಿ ಪ್ರೀತಿ. ಶಿವಭಕ್ತಿ ಸಂಪನ್ನೆಯಾದ ಅವಳ ನಿಷ್ಠೆಯೆಲ್ಲವೂ ಶಿವನಿಗೇ ಸೇರಿದ್ದು. ಶಿವಧ್ಯಾನದಲ್ಲಿ ಲೀನಳಾಗಿದ್ದಾಗ ಅವಳ ಕಮಲದಂತಹ ಕಂಗಳು ಮುಚ್ಚಿರುತ್ತವೆ. ಹರನ ಧ್ಯಾನದಲ್ಲಿದ್ದು ನಂತರ ಗಿರಿಜೆ ಕಂಗಳನ್ನು ತೆಗೆಯುವುದೂ ಒಂದು ಸೊಗಸು. "ಗಿರಿಸುತೆ, ಹರನಂಘ್ರಿಯ ತರಂಗದೊಳ್ ಮುಚ್ಚಿ ಪೊರಗೆ ನೋಳ್ಪಾಸೆಯೊಳ್ ಚರುಣಾರುಣೋದಯಕೆ ತಾವರೆಯಲರ್ದವೋಲಂದು ಮುಂದೆ ಕಣ್ದೆರೆದಿರ್ದಳ್". ಕಾಲಕ್ರಮೇಣ ಗಿರಿಜೆಗೆ ಯೌವನ ಬಂದಿತು. ಬಾಲ್ಯದ ಜೀವನ ಒಂದು ಬಗೆಯಾಗಿ ಕಳೆದರೆ ಯೌವನದ ಹುಮ್ಮಸ್ಸೇ ಒಂದು ರೀತಿ. ನಗು ನಸು ಲಜ್ಜೆಯೊಡನೆ ಬರುತ್ತದೆ. ಬಾಲ್ಯದ ವಿನೋದನೆಯಾದಂತೆ ಯೌವನ ಬಂದಿತು. ಅಂಗಾಂಗಳೆಲ್ಲವೂ ಪುಳಕಿತಗೊಂಡವು. ಗಿರಿಜೆಯ ಸೌಂದರ್ಯ ಬಣ್ಣಿಸಲು ಯಾರಿಗೂ ಅಳವಲ್ಲ. ಆಕೆಯ ಸೌಂದರ್ಯ ಎಷ್ಟು ಹೆಚ್ಚೆಂದರೆ ಅದನ್ನು ಬಣ್ಣಿಸಲು "ಶರ್ವಾಣಿಯ ಸೌಂದರ್ಯಮನೋರ್ವಂ ಬಣ್ಣಿಸುವನೆಂಬುವಂ ಗಾಂಪಂ. ಪನ್ನೀರ್ವರ್ ಭಾರತಿಯರ್, ಸಾಸಿರ್ವರ್ ಫಣಿರಾಜರಾದೊಡಂ ತೀರ್ವ ಪುದೇ". ಅನೇಕ ಸರಸ್ವತಿಯರೂ ಫಣಿರಾಜರೂ ಬಂದರೂ ಸಾಧ್ಯವಿಲ್ಲ. ಇನ್ನು ಪಾಮರನಾದ ಕವಿ ಬಣ್ಣಿಸುವುದು ಹೇಗೆ? ಕವಿ ಕೊನೆಗೆ ಹೀಗೆ ಹೇಳುತ್ತಾನೆ. ಗಿರಿಜೆಯ ಯೌವನವು "ಅತಿ ಮಧುರಮತಿ ಮನೋಹರಮತಿ ಮಂಗಳಮತಿ ವಿಚಿತ್ರಂ ಅತಿ ಬಂಧುರಂ" ಆಗಿದ್ದಿತು.

ಯುವತಿಯಾದ ಗಿರಿಜೆ ಏಕಾಂತವನ್ನು ಬಯಸಿ ಹೈಮಾಚಲಕ್ಕೆ ತಪಸ್ಸಿಗೆ ಹೊರಡುತ್ತಾಳೆ. ತಾಯಿ ಮೈನಾ ಕಾಡಿನ ಭಯಂಕರತೆಯ ಬಗೆಗೆ ಮಗಳನ್ನು ಎಚ್ಚರಿಸುತ್ತಾಳೆ. ಗಿರಿಜೆ ನಸುನಗೆಯಿಂದ ಹೊರಡುತ್ತಾಳೆ. ಎಲ್ಲವೂ ಇತ್ತು ಗಿರಿಜೆಗೆ. ಆದರೆ ಆಕೆಯು ಬಯಸಿದ ಮನಸ್ಸಿನ ದೈವವಿರಲಿಲ್ಲವಲ್ಲ. ಅದು ದೊರೆಯುವುದು ಕಠಿಣ ಶ್ರಮದಿಂದಲೇ ಆಗಿದೆ. ಹೀಗೆ ಕಾಡಿಗೆ ಬಂದ ಗಿರಿಜೆ ಜಟಾಧಾರಿಯಾಗಿರುವುದು ಕವಿಗೆ ಕಂಡರೀತಿ ಇದು. 'ಪರಿಮಳದಧಿದೇವತೆಯೋ, ವರಕುಮುದದ ಕೂಸ ಬಂದ ಶಶಿಕಳೆಯೋ ವಾರಿರುಹದ ನಡುವೆಯ್ತಂದ ಇಂದಿರೆಯೋ ಎನೆ ದೇವಿ ಪೂವನೋವುತಿರ್ದಳ್". ಇಷ್ಟು ಶುಭ್ರಳಾದ ಗಿರಿಜೆ ಹೂಗಳನ್ನು ಕಟ್ಟಲು ತೊಡಗಿದಳು. ಗಿರಿಜೆ

ನೋಡಿದರೆ, ಮುಟ್ಟಿದರೆ ಕೊರಗಿ, ಬಾಡಿ, ಕುಂದಿಹೋಗುವ ಹೂವುಗಳನ್ನು ಕಟ್ಟು ವುದು ಹೇಗೆ ಎಂದು ಚಿಂತಿಸುತ್ತಾಳೆ. ಅತಿ ಸುಕುಮಾರಿ, ಸುಖಾಕರೆ, ನುತಯುಕ್ತೆ, ಶಾಂತೆ, ಸಾತ್ವಿಕರೂಪಾನ್ವಿತೆ, ಸರ್ವಕಳಾನಿಧಿ ಯಾದ ಈಕೆ ಹೂಮಾಲೆಯನ್ನು ಸುಂದರ ವಾಗಿ ಕಟ್ಟಿ ಪ್ರೇಮದಿಂದ ಶಿವಲಿಂಗಕ್ಕೆ ಅರ್ಪಿಸುತ್ತಾಳೆ.

ಗಿರಿಜೆ ಕಾರುಣ್ಯದ ಮಾತೆ. ಆಕೆಯಲ್ಲಿ ಕರುಣಾರಸದ ಆವಿರ್ಭಾವ ಹೇಗಾಯಿತೆಂ ಬುದಕ್ಕೆ ಹರಿಹರ ಮದನನ ಪ್ರಸಂಗವನ್ನು ಚಿತ್ರಿಸಿದ್ದಾನೆ. ಮದನ ಶಿವದೃಷ್ಟಿಯಿಂದ ಭಸ್ಮೀಭೂತನಾದ. ಮದನನಿಲ್ಲದ ರತಿಯ ಬಾಳು ಬರಿಯ ಬೆಂಗಾಡಾಯಿತು. ರತಿ ಪಾರ್ವತಿಯನ್ನು ಕರುಣಾರ್ದ್ರಳಾಗಿ ಪ್ರಾರ್ಥಿಸುತ್ತಾಳೆ. "ಕರುಣಿಸು ತಾಯೇ ತವರೇ ಪರಿರಕ್ಷಿಸು, ದಯೆಯೊಳೀಕ್ಷಿಸುಡು ಗಿಸಿ ನೋವಂ ಪರಿಹರಿಸು ದುಃಖಂ ಕಾದು ಕೊಳ್ಳೆನ್ನಸುವಂ"– ಭವಾನಿಯ ದಿವ್ಯದೃಷ್ಟಿ ಬೀಳುತ್ತಲೇ ರತಿಯ ದುಃಖದ ಬಹುಪಾಲು ನಿವಾರಣೆಯಾಯಿತು. ಗಿರಿಜೆಯ ಛಲಕ್ಕೆ ಅವಳು ತಾನಿರುವಲ್ಲಿಗೇ ಶಿವ ಬರುವಂತೆ ಮಾಡುತ್ತೇನೆ ಎಂದು ತಪಸ್ಸು ಮಾಡುವು ವುದನ್ನು ಉದಾಹರಣೆಯಾಗಿ ಕೊಡ ಬಹುದು. ಬಹಳ ಕಠಿಣ ತಪಸ್ಸದು. ಅದನ್ನು ಸಾಮಾನ್ಯರು ಮಾಡುವುದಂತಿರಲಿ ಅದರ ಭಯಂಕರತೆಯನ್ನೂ ಕೇಳಲಾರರು.

ಬೇಸಿಗೆಯ ಕಾಲ ಬಂದಿತು. ಎಲ್ಲೆಲ್ಲೂ ಬಿಸಿಲೇ ಬಿಸಿಲು. ಬಿಸಿಲಿನ ತಾಪ ಗಿಡ- ಮರ–ಬಳ್ಳಿ – ಪಶು – ಪಕ್ಷಿ – ಕೆರೆ – ಭಾವಿ, ಮನುಷ್ಯರು ಸಕಲ ಜಂತುಗಳಾದಿಯಾಗಿ "ಮರದಡಿಯೊಳ್, ಕಾನನದೊಳ್, ಗಿರಿತಟ ದೊಳ್ ಬಟ್ಟ ಬಯಲೊಳ್ ಇರುವ ಕರಿಯ ಬಿಸಿಲ್, ಉರಿಯ ಬಿಸಿಲ್, ಅಜ್ಜ ರಿಯ ಬಿಸಿಲ್, ಅಖಂಡಿತದ ಬಿಸಿಲ್, ಪಿರಿಯ ಬಿಸಿಲ್," ಹಬ್ಬಿತು. ಈ ಬಿಸಿಲಿನ ನಡುವೆ ಪಂಚಾಗ್ನಿ ಮಧ್ಯದಲ್ಲಿ ಕುಳಿತು– ನೆರೆ ಗಂಗಾಧರನಂ ಶಶಿಧರನಂ ನೆನೆದು– ಬೇಸಿಗೆಯನ್ನು ಕಳೆದಳಂತೆ ಗಿರಿಜೆ. ಕವಿ ನಂತರ ಬಂದ ಚಳಿಗಾಲದ ನೈಜ ಚಿತ್ರಣ ವನ್ನು ಮಾಡಿದ್ದಾನೆ. 'ಒಡಲ ಪ್ರಾಣಂಗೆ ಚಳಿಯ ಕುಪ್ಪಸದಂತೆ' ಆಗಿರುವಾಗ ಮಿಕ್ಕ ಮಾತುಗಳೇಕೆ. ಇಂತಹ ಚಳಿ– 'ಪುಟ್ಟಿತು ಚಳಿಮುಟ್ಟಿತೆಲ್ಲಾ ಚಳಿ ಪೊಸಚಳಿ',– ಆದರೆ ಗಿರಿಜೆ ಚಳಿಗೆ ಹೆದರುವವಳೇ? ಚಳಿಯಾಗಲಿ, ಮಳೆಯಾಗಲಿ, ಏಕೋನಿಷ್ಠೆಯಿಂದ ಶಿವ ನನ್ನು ಆರಾಧಿಸಿದಳು ಗಿರಿಜೆ. ಶಿವಮಾತ್ರ ಗಿರಿಜೆಯನ್ನು ಪರೀಕ್ಷಿಸುತ್ತಲೇ ಇದ್ದ. ಎಲ್ಲಾ ಸಂಕಟಗಳನ್ನು ಗಿರಿಜೆ ಜಯಿಸಿದಾಗ ಅವ ಳಿಗೆ ಕೊನೆಯದಾಗಿ ಒಂದು ಪರೀಕ್ಷೆ ಉಳಿ ಯಿತು. ಶಿವನೇ ವಟುವಿನ ವೇಷ ಧರಿಸಿ ಕೊಂಡು ಗಿರಿಜೆಯ ಬಳಿ ಬಂದ. "ನೀನಿಷ್ಟು ಸುಂದರಿ! ಆ ಸ್ಮಶಾನವಾಸಿಯನ್ನು ಏಕೆ ವರಿಸುವ ಆಸೆ ಇಟ್ಟುಕೊಂಡಿರುವೆ. ಯಾರಾ ದರೂ ಸುಂದರಾಂಗನನ್ನು ವರಿಸಿ ಈ ವಯ ಸ್ಸಿನಲ್ಲಿ ಸುಖಪಡಬಾರದೇ" ಎಂಬರ್ಥ ಬರುವಂತಹ ಮಾತುಗಳನ್ನಾಡಿದ. ಗಿರಿಜೆಗೆ ತನ್ನ ಆರಾಧ್ಯ ದೈವದ ನಿಂದೆಯನ್ನು–ಅದೂ ಒಬ್ಬ ವಟುವಿನಿಂದ – ಕೇಳಿದಾಗ ಅಸಾಧ್ಯ ವಾದ ಕೋಪ ಬಂದಿತು. ಅಂತೆಯೇ ಅವಳು ಶಿವನಿಂದೆ ಕೇಳಿದೊಡನೆ ಕೈಲಿದ್ದ ವಿಭೂತಿಯ ಗಟ್ಟಿಯನ್ನೇ ಅವನತ್ತ ಒಗೆ ದಳು. ಶಿವನಾದರೇನು? ಯಾರಾದರೇನು? ಶಿವನಿಂದೆ ಮಾಡಬಹುದೆ? "ಶಿವನಾದೊಡೇಂ ಪುಸಿದಿಟಕ್ಕೆ ನಿಲ್ವುದೇ" ಎಂದು ಕವಿ ಕೇಳು ತ್ತಾನೆ. ಇದೇ ಪ್ರಸಂಗ ಶಿವ-ಶಿವೆಯರ ಮದುವೆಯ ಮುಹೂರ್ತದ ಜೀರಿಗೆ ಬೆಲ್ಲವಾ ಯಿತು. ಶಿವ ಗಿರಿಜೆಯನ್ನು ವರಿಸಿದ. ಗಿರಿ ಜೆಯ ಕೋರಿಕೆಯನ್ನು ಕೇಳಿದ. ಅದರಂತೆ ಮದನನನ್ನು ಬದುಕಿಸಿದ. ರತಿಯ ಬಾಳು ತುಂಬಿದ ಕೊಳವಾಯಿತು. ಶಿವ ವಿವಾಹ ವಾದನಂತರ ಗಿರಿಜೆಯೊಡನೆ ಕೈಲಾಸಕ್ಕೆ ಹೋಗಲು ಇಚ್ಛಿಸಿದ. ಆದರೆ ಶಿವೆ ಇದಕ್ಕೆ ಒಪ್ಪಲಿಲ್ಲ. ಇದು ಯಾರಿಗೂ ಕಾಣದಂತೆ ಆದ ವಿವಾಹ. ಗಿರಿರಾಜನಲ್ಲಿ ತಾವು ಬಂದು ಬೇಡಿಕೊಂಡು ನಂತರ ಲೋಕಕ್ಕೆ ತಿಳಿಯು ವಂತೆ ವಿವಾಹವಾಗಬೇಕು. ಆಗ ಕೈಲಾ ಸಕ್ಕೆ ನಾನು ಬರಬಹುದು. ಪಾರ್ವತಿಯ ಕೋರಿಕೆಯಿದು "ದೇವ, ಗಿರೀಶನಲ್ಲಿ ಎನ್ನ ನಾದರದೊಳೆ ಬೇಡಿಯೂರ್ಜಿತವಿವಾಹ ಮದಜ್ಞರಿಯಪ್ಪ ಮಾಳ್ಕೆ ಕರುಣಿಪುದೆಂ ದಳು." ಭಾರತೀಯ ನಾರಿ ಧರ್ಮಾಚರಣೆ, ಸುಸಂಸ್ಕೃತ ನಡವಳಿಕೆ, ಮನೆತನದ ಪದ್ಧ ತಿಗಳು – ಇವನ್ನು ಬಿಡದೆ ಹೇಗೆ ಪಾಲಿಸಿ ಕೊಂಡು ಬರುತ್ತಾಳೆಂಬುದಕ್ಕೆ ಸಾಕ್ಷಿಯಾಗಿ ಗಿರಿಜೆಯಿದ್ದಾಳೆ. ಪರಿಶುದ್ಧವಾದ ಏಕೋ ನಿಷ್ಠೆಯ ಭಕ್ತಿಯಿಂದ ಶಿವನನ್ನೇ ಒಲಿಸಿ ಕೊಂಡ ಗಿರಿಜಾದೇವಿ ಇಂದಿಗೂ ಆದರ್ಶ ಪಾತ್ರಳಾಗಿದ್ದಾಳೆ. ನಾರದ ಗಿರಿಜೆಯನ್ನು "ಶ್ರೀನಿಧಿ, ಶಾಂಕರಿ, ಶೈವ ಜ್ಞಾನಿ, ಸದಾ ವರದೆ, ಭುವನಭರಿತೆ, ಭವಾನೀ, ಮಾನಿನಿ, ಮಾತೆ, ಮಹೇಶಧ್ಯಾನಿ, ಮಹಾದಾನಿ, ನೀನೆ ಶರಣೆನುತ್ತಿರ್ದಂ" ಎಂದು ಸ್ತುತಿಸಿ ರುವಂತೆ ಆ ಪರಮಮಂಗಳೆಯಾದ ಗಿರಿಜಾ ದೇವಿಯು ಕರುಣಾಮಯಿಯಾಗಿ ಎಲ್ಲ ರನ್ನೂ ಕಾಪಾಡುತ್ತಾಳೆ. ಲೋಕಕಲ್ಯಾ ಣವನ್ನುಂಟುಮಾಡುತ್ತಾಳೆ.

'ಗಿರಿಜಾಕಲ್ಯಾಣ'ದ, ಕಥೆಯನ್ನು ಆಯ್ದುಕೊಂಡು ಗಿರಿಜೆಯ ಪಾತ್ರ ನಿರ್ಮಾಣ ವನ್ನು ಅನೇಕ ಕವಿಗಳು ಮಾಡಿರಬಹುದು. ಆದರೆ ಉತ್ಸಾಹ, ಭಕ್ತಿ, ತತ್ತ್ವ, ಮಾನ ವೀಯ ಭಾವನೆಗಳಿಂದ ಹರಿಹರ ಕವಿಯು ಗಿರಿಜೆಯ ಪಾತ್ರ ಸೃಷ್ಟಿಯನ್ನು ಮಾಡಿರು ವಂತೆ ಇತರರು ಮಾಡಿಲ್ಲವೆಂದರೆ ಅದರಲ್ಲಿ ಅತಿಶಯವಾದುದೇನೂ ಇಲ್ಲ. ಹರಿಹರನ ಗಿರಿಜೆ, ಕಾವ್ಯದ ನಾಯಕಿಯಾಗಿ ಮಹತ್ತು, ಉದಾತ್ತತೆಗಳಲ್ಲಿ ಕನ್ನಡ ಸಾಹಿತ್ಯದಲ್ಲಿ ಉನ್ನತವಾದ, ದೇದೀಪ್ಯಮಾನವಾದ ಸ್ಥಾನ ವನ್ನು ಪಡೆದುಕೊಂಡಿದ್ದಾಳೆ ಎಂದು ಹೇಳ ಬಹುದು.

———

# ಹರಿಹರನ ಶಿವಭಕ್ತಿ

ಕನ್ನಡದ ಕ್ರಾಂತಿಕಾರಿ ಕವಿ ಹರಹರದೇವನ ಕಾರ್ಯಸಾಧನೆಗೆ ಆಡುಂಬೊಲವಾಗಿದ್ದ ಸ್ಥಳ ಹಂಪೆ. ಪಂಪಾ ವಿರೂಪಾಕ್ಷನೇ ಅಲ್ಲಿಯ ಚಕ್ರವರ್ತಿ. ಭಕ್ತಜನ ಸಮುದಾಯವೇ ಸಭಾಸದರು. ಕವಿಯೇ ಬೋಧಕ–ಇದುವೆ ಅವನ ಕಾವ್ಯ ಶಿವಮುಖವಾಗಿ ಶರಣರ ಚರಿತೆಗಳಾಗಿ, ಭಕ್ತಿ ಭಂಡಾರಗಳಾಗಿ ರಸದ ಚಿಲುಮೆಗಳಾಗಿ ಚಿಮ್ಮಲು ಇದ್ದ ಹಿನ್ನಲೆ. ಕವಿಗೆ ಹಂಪೆ ಮತ್ತು ವಿರೂಪಾಕ್ಷನ ಹೆಸರುಗ ಳನ್ನು ನೆನೆದರೆ ಸಾಕು, ಉತ್ಸಾಹ ಎಣೆಯಿಲ್ಲದೆ ಹಿಗ್ಗುತ್ತದೆ. ಆಗ ಅವನ ಕವಿತಾ ಶಕ್ತಿ ತನ್ನ ಪ್ರತಿಭೆ ಪಾಂಡಿತ್ಯಗಳ ರೆಕ್ಕೆಗಳನ್ನು ಹರಡಿ, ಭಕ್ತ ಹೃದಯವನ್ನು ತೆರೆದು, ದಣಿವಿಲ್ಲದೆ ಹಾಡುತ್ತಾ ಹಾರುತ್ತದೆ. ಈ ರೀತಿಯಲ್ಲಿಯೆ ಅವನು ತನ್ನ ಆತ್ಮ ಕಥನದ, ಭಕ್ತಿ ಭಾವದ 'ಪಂಪಾಶತಕ', 'ರಕ್ಷಾಶತಕ'ಗಳನ್ನು, ವಿರೂಪಾ ಕ್ಷನ ಸರ್ವ ಶ್ರೇಷ್ಠತೆಯನ್ನು ಸಾರುವ 'ಮುಡಿ ಗೆಯ ಅಷ್ಟಕ' ವನ್ನು ಬರೆದುದು. ಮುಂದೆ ಮನ ದುಂಬಿ ಆವೇಶಗೊಂಡು ಭಕ್ತಿಯ ಪರಮ ಸುಖದಲ್ಲಿ ಮುಳುಗಿ ಶಿವಶರಣರ ಕಥೆಗಳನ್ನು ರಗ ಳೆಯ ಛಂದಸ್ಸಿನಲ್ಲಿ ಹಾಡಿ, ಆ ಹಾಡಿನಲ್ಲಿ ತನ್ನನ್ನು ತಾನು ಮರೆತದ್ದು. ಅಲ್ಲಿನ ತುಂಗ ಭದ್ರಾನದಿಯ ನಿರ್ಮಲ ಜಲದಿಂದ ವಿರೂಪಾಕ್ಷ ನಿಗೆ ಮಜ್ಜನಂಗೈಸಿ, ಪುಷ್ಪಗಳಿಂದ ಪೂಜಿಸಿ, ಸವಿನುಡಿಯಿಂದ ಸ್ತುತಿಸಿ, ಭಕ್ತಿಭಾವವನ್ನು ಉದ್ದೀಪನಗೊಳಿಸಿಕೊಂಡದ್ದು. ಈ ಕ್ಷೇತ್ರದಲ್ಲಿ ಹರಿವ ತುಂಗೆಯೇ ಅವನಿಗೆ ಗಂಗೆ. ಅದು ದುರಿ ತವನು ಪರಿಹಾರ ಮಾಡುವ ಸುರಚಿರನದಿ. ಆ ಹಂಪೆಯೇ ತನ್ನ ವಾಸದ ಊರು; ಕುಲಗುರು ಗಳ ನೆಲೆ ಮನೆ; ಕುಲದೈವದ ಕ್ಷೇತ್ರ.

ಭಕ್ತಿಯೇ ಭಕ್ತರ ಶಕ್ತಿ. ಆದರೆ ಅದು ಪ್ರದರ್ಶ ನದ ವಸ್ತುವಲ್ಲ. ಅದೊಂದು 'ಅಂತರಂಗದ ರತ್ನ' ಹರಿಹರನ ಭಕ್ತ ಅಶ್ರು, ಪುಳಕ, ಸ್ವೇದದಂಥ ಸಾತ್ವಿಕ–ಭಾವಗಳಲ್ಲಿ ಅಭಿವ್ಯಕ್ತವಾದ ಅನುಭಾವ ಭಕ್ತಿಯೆಂಬುದನ್ನು 'ತೆರೆಮುಸಗಲ್ ಸುಖಾಶ್ರು' ಮೊದಲಾಗಿ 'ಮದೀಶ ನಿಜಭಕ್ತಿ ತರಂಗಿಣಿ ಮೀರುತುಬ್ಬರಂಬರಿವುತುಮೆನ್ನ ಮೇಲೆ ಮ.ಡು ಗಟ್ಟುವುದೆಂದೆಲೆ ಹಂಪೆಯಾಳ್ದನೆ' ಎಂದು ಮುಗಿಯುವ ಪದ್ಯದಲ್ಲಿ ನೋಡಬಹುದು ಈ ಭಕ್ತಿರಸದ ಉತ್ಕಟತೆ–ತನ್ಮಯತೆಗಳನ್ನು, ಕೊರಗು ಕಳವಳಗಳನ್ನು ಉದ್ಗಾರ – ಪುನರುಕ್ತಿಗಳಿಂದ ವಿಶಿಷ್ಟವಾದ ಶೈಲಿಯಲ್ಲಿ ಹರಿಹರನು ವ್ಯಕ್ತಪಡಿ ಸಿದ್ದಾನೆ ಅವನ ವ್ಯಕ್ತಿವಿಶಿಷ್ಟ ಶೈಲಿ ಅವನ ಎಲ್ಲ ಕೃತಿಗಳಲ್ಲಿ ಏಕತಾನವಾಗಿ ಮೆರೆದಿದೆ. ಸಾಹಿತ್ಯ ದೃಷ್ಟಿಯಿಂದ ಅವನ ಶತಕಗಳು ಕಲ್ಪನಾ ಶಕ್ತಿ ಯಿಂದ ಭಾವಶಕ್ತಿಯಿಂದ, ವಿಶಿಷ್ಟ ಸಹಜ ಶೈಲಿ ಯಿಂದ ರಮ್ಯವಾಗಿವೆ, ಭಾವಗೀತೆಯ ಸತ್ವವನ್ನು ಪಡೆದಿದೆ. ಇಲ್ಲಿ ತತ್ತ್ವವಿದೆ, ಮತೀಯ ಅಭಿನಿವೇಶ ವಿದೆ, ಆದರ ನೀರಸವಾದ ಭಾವನಿರೂಪಣೆಯೆ ಲ್ಲಿಯೂ ಇಲ್ಲ. ಪಂಪಾಶತಕದ ಪದ್ಯ ೮೭–೮೨ ರಲ್ಲಿ ಒಂದು ಪ್ರತಿಜ್ಞೆ, ಒಂದು ಬೋಧನೆ ಎಂದರೆ

'ಈಶ್ವರಂಗೆಯ್ದೆ ನಾಲಗೆಯಂ ಮಾರಿದೆಂ...... ಮನುಜರ ಮೇಲೆ ನಾವವರ ಮೇಲೆ ಕಸಿವ್ವರ ಮೇಲೆ...... ಅನವರತಂ ಪೊಗಳ್ದು ಕೆಡಬೇಡಲೆ ಮಾನವ ನೀನಹರ್ನಿಶಂ ನೆನೆ ಪೊಗಳರ್ಚಿಸೆಮ್ಮ ಕಡುಸೊಂಪಿನ ಪೆಂಪಿನ ಹಂಪೆ ಯಾಳ್ದನಂ'

ಭಕ್ತಿ ತನ್ಮತೆಯಲ್ಲಿ ವಿಚಾರದಲ್ಲಿ ಹರಿಹರನ್ನು ಮೀರಿಸುವ ಕವಿ ಕನ್ನಡದಲ್ಲಿ ಇನ್ನೊಬ್ಬನಿಲ್ಲ. ಇವನಿಗೆ ಸರಿಸಮಾನವಾಗಿ ನಿಲ್ಲಬಲ್ಲ ಇನ್ನೊಬ್ಬ ಕವಿ ಎಂದರೆ ಕುಮಾರವ್ಯಾಸ. ಕೃಷ್ಣ ಬಂದಾಗ ಅವನ ಭಕ್ತಿ ಹೊನಲಾಗಿ ಹರಿಯುತ್ತದೆ. ಆದರೆ ಆತನ ಕಾವ್ಯವಸ್ತು ಭಕ್ತಿಯೊಂದರಲ್ಲೇ ನ್ಯೆಮರೆ ಸುವಂತಹುದಲ್ಲ. ಹರಿಹರ ತನ್ನ ಮನೋ ಧರ್ಮಕ್ಕನುಗುಣವಾದ ವಸ್ತುಗಳನ್ನೇ ಆರಿಸಿ ಕೊಂಡು ಭಕ್ತಿ ನಿರ್ಭರತೆಯಲ್ಲಿಯೇ ಓಲಾಡಿ ಭಕ್ತಿಯ ವಿರಾಡ್ರೂಪವನ್ನು ಸೃಷ್ಟಿಸಿದನು ಕೈಲಾ ಸಕ್ಕೆ ಸೇತುವೆಯನ್ನು ಕಟ್ಟಿ ಒಂದು ಹೊಸ ಲೋಕವನ್ನೇ ಇಳಿಸಿ ತಂದ ಏಕೈಕ ಕವಿ ಹರಿ ಹರ.

ಹರಿಹರನ ಶತಕಗಳು ನೇರವಾಗಿ ಕವಿ ಹೃದ ಯದ ಆಂತರಿಕ ಅನಿಸಿಕೆಗಳನ್ನು ಸಾಧನೆಯ ವಿವಿಧ ಹಂತಗಳನ್ನೂ ಸಮರ್ಥವಾಗಿ ಪ್ರತಿ ಬಿಂಬಿಸಿವೆ. ಸಾಧನೆಯ ಪ್ರಾರಂಭದ ತಳಮಳ ದಿಂದ ಹಿಡಿದು ಆನಂದದ ಉದ್ಗಾರದವರೆಗೂ ಬೆಳೆದಿರುವ ಕವಿ ಚೇತನದ ಸಮಗ್ರದರ್ಶನಕ್ಕೆ ಪಂಪಾಶತಕ, ರಕ್ಷಾಶತಕಗಳು ಕಿಟಕಿಯನ್ನು ತೆರೆ ದಿವೆ. ಲೌಕಿಕ ವಿಷಯಸುಖದಲ್ಲಿ ಸಿಕ್ಕ ಜೀವದ ಪಾಡನ್ನು ರಕ್ಷಾಶತಕದ ಮೊದಲ ಕೆಲವು ಪದ್ಯ ಗಳು ಪ ಣಾಮಕಾರಿಯಾಗಿ ಚಿತ್ರಿಸಿವೆ

ಮನನೆನ್ನಂ ದುರ್ವಿಕಾರಕ್ಕೆಳೆದಪುದು
ಮನಂ ಮಾನಮಂ ನುಂಗಿದತ್ತೀ
ಮನವಾಶಾಪಾಶಪ್ಪುಯೊಳ್ ನೂಂಕಿದಪುದು
ಮನವೀ ಮಾಯೆಯಂ ಬಿಟ್ಟು ನಿಮ್ಮಂ
ನೆನೆಯಲ್ ತಾನೀಯದಯ್ಯೋ ಶಿವನೆ ಭವನೆ
ಕಾರುಣ್ಯವಾರಾಶಿಯೆನ್ನೀ
ಮನಮಂ ಸಯ್ತುಟ್ಟು ಪಂಪಾಪುರದರಸ
ವಿರೂಪಾಕ್ಷ ರಕ್ಷಿಪ್ಪುದೆನ್ನಂ ।

– ಎಂದು ಒಂದು ಕಡೆ ಪ್ರಾರ್ಥಿಸಿದರೆ, ಇನ್ನೊಂದು ಕಡೆ ಸದಾ ಮೋಹ, ಮದ, ಮಾತ್ಸ ರ್ಯಾದಿಗಳತ್ತ ಹರಿಯುತ್ತಿರುವ ಮನಸ್ಸನ್ನು ತುಂಬಿ ಅದನ್ನು ಉದಾತ್ತಗೊಳಿಸುವಂತೆ ಶಿವನ ಮೊರೆಹೋಗುತ್ತಾನೆ. ಏಕೆಂದರೆ ಮನಸ್ಸು ಸ್ಥಿರವಾಗ ಬೇಕಾದರೆ, ಮಾಯೆಯ ಮಂಜು ಹರಿಯಬೇಕಾದರೆ, ಅನಾಸಕ್ತಿಯ ಕಟ್ಟು ಕಟ್ಟ ಬೇಕು, ವೈರಾಗ್ಯದ ಭಾನು ಬೆಳಗಬೇಕು ಅದಕ್ಕಾಗಿ ಕವಿಯ ಪ್ರಾರ್ಥನೆ –

ಪ್ರತ್ಯಕ್ಷಂ ಸತ್ತು ಹೋಗುತ್ತಿದೆ ನರನಿಕರಂ
ತಾನದಂ ಕಂಡುಕಂಡುಂ
ನಿತ್ಯತ್ವಂಬೆತ್ತ ಪಾಂಗಿಂ ಪಳಿವ ಮುಳಿವ
ಕಾಮಿಪ್ಪ ಕೋಪಿಪ್ಪ ಲೋಭಿ
ಪ್ಪತ್ಯಂತಂ ಗರ್ವಿಪೆನ್ನೀ ಮನಕೆ ಪರಮ
ವೈರಾಗ್ಯಮಂ ಕೊಟ್ಟು ಸತ್ಯಂ
ಸತ್ಯಂ ಸತ್ಯಾತ್ಮ ಪಂಪಾಪುರದರಸ
ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥

ವಿರಕ್ತಿಹುಟ್ಟಿ, ಭದ್ರವಾಗಿ, ಆಸೆನೀಗಿ, ತಾಪ ತ್ರಯ ಹಿಂಗಿ, ಅಹಂಕಾರ ತೊಲಗಿ, ದುಶ್ಚಿಂತನೆ ಮಾಯವಾಗಿ, ಶಿವಪೂಜೆ ಶಿವಶರಣವಚನ, ಸಂಕೀ ರ್ತನೆ ಸತ್ಕಾರ ಶಿವಸ್ತೋತ್ರ ಪಂಚಾಕ್ಷರೀ ಜಪ ಗಳಿಂದ ಮನಸ್ಸಿನ ಅಸ್ಪೃಶ್ಯತೆ ತೊಲಗಿ ಶಿವಾರ್ಪ ಣೆಗೆ ತಕ್ಕವನಾಗುತ್ತಾನೆ ಜೀವ. ಭಕ್ತಿಯ ಬಯಕೆ ಉಂಟಾಗುತ್ತದೆ. ಆಗ ಜೀವನ ಮೊರೆಯನ್ನು ಶಿವ ಕೇಳುತ್ತಾನೆ; ಒಂದು ಕೈಯಿಟ್ಟು ರಕ್ಷಿಸುತ್ತಾನೆ. ಮನಸ್ಸಿನ ಚಂಚಲತೆಯನ್ನು ಅದರ ಪರಿಣಾಮುಗ ಳನ್ನು ದೇಹದ ನಶ್ವರತೆಯನ್ನು ಪರಿಮಿತಿಯನ್ನು ಈತ ಹೇಳುವರೀತಿ ತುಂಬಾ ಪರಿಣಾಮಕಾರಿಯಾ ಗಿದೆ. ಇದರಿಂದ ದಾಟಿಸುವಂತೆ ಶಿವನನ್ನು ಪ್ರಾರ್ಥಿ ಸುವ ಪ್ರಾರ್ಥನಾಪರವಾದ ಪದ್ಯಗಳಂತೂ ಹೃದ್ಯವಾಗುತ್ತವೆ.

ಕರೆವಲ್ಲಿಂ ಮುನ್ನ ಓ ಓ ಮಗನೆ ಬಂದೆಂ
ದಿಟಂ ಬಂದೆನೆಂದಾ

ಶ್ರೀಮತಿ ಎ. ಎಸ್. ಪಂಕಜ
ಎಂ ಎ , ಬಿ.ಇಡಿ.

ದರದಿಂ ನೀನೆ ಬಂದೆನ್ನ ವಯವನಿತಂ
ಮುಟ್ಟಿ ನೊಂದಾ ಬಳಲ್ದಾ
ಕರೆದಾ ಕಂದಾ ಎನುತ್ತಂ ಕೃಪೆ ಮಿಗೆ
ನಲವಿಂ ನೋಡಿ ಮುಂಡಾಡುತೆನ್ನೀ
ಸಿರದೊಳ್ ಕೈಯಿಕ್ಕಿ ಪಂಪಾಪುರದರಸ
ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥

ಕರೆಯುವುದಕ್ಕೆ ಮೊದಲೇ ಶಿವ ಓಗೊಟ್ಟು ಓಡಿ ಬರಬೇಕಂತೆ. ಅವನ ದೇಹವನ್ನು ತಡವರಿಸಿ ಮುದ್ದಾಡಿ 'ಕಂದಾ ನನ್ನನ್ನು ಕರೆದೆಯಾ' ಎನ್ನುತ್ತಾ ಸಂತೈಸ ಬೇಕಂತೆ. ಆದಕ್ಕೆ ಸರ್ವಾರ್ಪಣೆಯ ಸಂಪೂರ್ಣ ಶರಣಾಗತಿಯೊಂದೇ ಮಾರ್ಗವೆಂಬುದನ್ನು ಆತ ಬಲ್ಲ; ಆದ್ದರಿಂದಲೇ –

ನಿಮಗೆನ್ನಂ ಮಾರುಗೊಟ್ಟೆಂ ಪುರಹರ
ನಿಮಗೆನ್ನಂ ಸದಾ ತೊಳ್ತುಗೊಟ್ಟೆಂ
ನಿಮಗೆನ್ನಂ ಸೂರೆ ಗೊಟ್ಟೆಂ ನಿಮಗೆ
ಹರುಷದಿಂದೊಚ್ಚತಂ ಕೊಟ್ಟೆನಾಹಾ ।
ನಿಮಗೆನ್ನಂ ಮಚ್ಚುಗೊಟ್ಟೆಂ ಗುರುವೆ
ಘನವೆ ಸಂತೋಷದಿಂದೊಪ್ಪುಗೊಟ್ಟೆಂ
ನಿಮಗೆನ್ನಂ ದೇವ ಪಂಪಾಪುರದರಸ
ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥

ಎಂದು ಬೇಡಿ ಕವಿ ತಾನೇ ಪಶುಪತಿಯ ಅಧೀನತೆಗೆ ಸಂದು ಯಾವ ಸಂತಾಪವೂ ಇಲ್ಲದೆ ಹಾಯಾಗಿದ್ದಾನೆ.

ಬಿಡೆನೀಶಾ ನಿಮ್ಮ ಪಾದಾಬ್ಜ ಮನೆಲಿಲೆ
ಬಿಡೆಂ ಸೀಳ್ದೊಡಂ ಪೋಳ್ದೊಡಂಪೊ
ಯ್ದೊಡದಂತಿಂತೆಂದುಮೆಂದುಂ ಬಿಡೆನಭವ
ಬಿಡೆಂ ಸರ್ವದಾ ಮಾಣೆ ನಾಂಬ
ಲ್ವಿಡಿದೆಂ ಮತ್ತತ್ತಮಿತ್ತಂ ಚಲಿಸೆನೆಲೆ
ಮಮಸ್ವಾಮಿ ನಿಮ್ಮಾಜ್ಞೆಯಿಂದಂ
ಮೃಡನೇ ಭಕ್ತ್ಯರ್ಥಿ ಪಂಪಾಪುರದರಸ
ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥

ಪಂಪಾಶತಕದ ಪ್ರಾರಂಭದಲ್ಲಿಯೂ ಶಿವನತ್ತ ತಿರುಗಿದ ಸಾಧಕ ಚೈತನ್ಯ ಮುನ್ನಡೆದ ಶೋಧಕ ಹೆಜ್ಜೆಗಳು ಮೂಡಿವೆ. "ಕರೆವುದದೆಂದು ಕಾಲ್ವಿಡಿಸಿ ಕೊಳ್ವುದದೆಂದು........." ಎಂದು ಹಂಬಲಿಸುವ ಪದ್ಯಗಳಲ್ಲಿ ಹರಹರ ದೇವನ ಭಕ್ತಿಯ ತೀವ್ರತೆ ಗಮನೀಯವಾದ ಅಂಶ. ಅವನ ಹಾರೈಕೆಗೆ ಸಾಕ್ಷಿಯಾಗಿ ಈ ಒಂದು ಪದ್ಯವೇಸಾಕು –

ನಡೆತಂದೆನ್ನಯ ಕಣ್ಗಳಲ್ಲಿರು ವಿರೂಪಾಕ್ಷ
ವಿರೂಪಾಕ್ಷನೀಂ
ಬಿಡದಂತೆನ್ನಯ ಜಿಹ್ವೆಯಲ್ಲಿರು ವಿರೂಪಾಕ್ಷ
ವಿರೂಪಾಕ್ಷನೀಂ ।
ಎಡೆಗೊಂಡೆನ್ನಯ ಚಿತ್ತದಲ್ಲಿರು ವಿರೂಪಾಕ್ಷ
ವಿರೂಪಾಕ್ಷನೀಂ
ಇಡಿದಂತೆನ್ನೊಳೆ ಕೂಡಿ ನಿಲ್ಲೆಲೆ ವಿರೂಪಾಕ್ಷ
ವಿರೂಪಾಕ್ಷನೀಂ ॥

ಹೀಗೆ ಕಣ್ಣು ನಾಲಿಗೆ ಮನದಲ್ಲಿ ಮತ್ತು ಕೊನೆಗೆ ತನ್ನ ಇಡೀ ವ್ಯಕ್ತಿತ್ವವನ್ನೇ ವಿರೂಪಾಕ್ಷನು ವ್ಯಾಪಿಸಲಿ ಎಂದು ಬೇಡಿಕೊಳ್ಳುತ್ತಾನೆ. ಈ ಸರ್ವಾರ್ಪಣೆ ಭಾವ ಅವನ ಶತಕಗಳ ಸಾಲು ಸಾಲಿನಲ್ಲಿಯೂ ಹರಿದಾಡುವ ಜಂಗಮಶಕ್ತಿಯೂ ಆಗಿದೆ. ಆತ ವಿರೂಪಾಕ್ಷನನ್ನು ಸ್ತುತಿಸಲಿ, ಶರಣರ ಮಹಿಮೆಯನ್ನು ಹಾಡಲಿ, ಜಗತ್ತಿನ ನಶ್ವರತೆಯನ್ನು ಕಂಡು ಅದನ್ನು ನಿರಾಕರಿಸುವ ವೈರಾಗ್ಯವನ್ನು ತಳೆದಿರಲಿ ಅಥವಾ ಇದರ ಹಿಂದಿರುವ ಶಾಶ್ವತೆಯನ್ನು ಕಾಣುವ ಅಂತರ ದೃಷ್ಟಿಯಲ್ಲಿರಲಿ, ಧ್ಯಾನ ಪರವಶನಾಗಿರಲಿ – ಈ ಎಲ್ಲಾ ಭಾವಗಳಲ್ಲಿಯೂ ಆತನ ಭಕ್ತಿಯ ಹಿಂದಿರುವ ನಿರಂತರ ಶಕ್ತಿಯೆಂದರೆ ತನ್ಮಯತೆಯ ಉತ್ಸಾಹ. ಆತನ ಭಕ್ತಿಯನ್ನು ಅದು ಚೈತನ್ಯಪೂರ್ಣವಾಗಿಸುತ್ತದೆ. ಈ ಪದ್ಯವನ್ನು ನೋಡಿ –

"ಕರಣಂಗಳ್ ಕಳೆಯೇರೆ ಲೋಚನಯುಗಂ
ನೀರೇರೆ ಮೈಯೆಲ್ಲವು
ಕುರವೇರಲ್ ನುಡಿಕಂಪವೇರೆ ಚರಣಂಗಳ್
ಲೀಲೆಯೇರಲ್ ಮೊಗಂ
ಸಿರಿಯೇರಲ್ ತಲೆಗೇರಿದುತ್ಸವದೆ ನಿಮ್ಮಂ
ಪೂಜಿಸುತ್ತಾನು ಮಾ
ದರದಿಂದೀಕ್ಷಿಸುತಾಡುತಿರ್ಪುದೆನಗಿನ್ನೆಂದೋ
ವಿರೂಪಾಕ್ಷನೇ ॥

ಇಂದ್ರಿಯಗಳೆಲ್ಲಾ ಶಿವಭಕ್ತಿ ಕಳೆಯಿಂದ ಕೂಡಿ ಕಣ್ಣುಗಳು ಆನಂದ ಬಾಷ್ಪವನ್ನು ಸುರಿಸುತ್ತಾ ಪುಳಕಿತಗಾತ್ರನಾಗಿ ಗದ್ಗದ ಧ್ವನಿಯಿಂದ, ಉತ್ಸಾಹ ತಲೆಗೇರಿದ ಆವೇಶದಿಂದ ಪೂಜಿಸುತ್ತಾ ಕುಣಿದಾಡುವ ಭಕ್ತಿ ನಿರ್ಭರತೆಯ ಈ ಚಿತ್ರ ಕಣ್ಣಿಗೆ ಕಟ್ಟುತ್ತದೆ.

ಹೀಗೆ ಶತಕಗಳಲ್ಲಿ ಭಕ್ತಿಯೇ ಪ್ರಧಾನ ವಸ್ತುವಾಗಿದೆ. ಭಕ್ತಿಗೆ ಪೂರಕವಾಗಿ ವೈರಾಗ್ಯ, ನೀತಿ ಶೃಂಗಾರವೂ ಹೇರಳವಾಗಿ ಮೈದೋರಿದೆ. ಇಂಥ ವಸ್ತುಗಳನ್ನೊಳಗೊಂಡ ಶತಕಸಾಹಿತ್ಯ ಜನರಿಗೆ ಬಹುಹಿತವಾಗಿ ತೋರಲು ಅವರಿಗಿರುವ ಆಧ್ಯಾತ್ಮದ ಬಲವೇ ಕಾರಣ.

ಗಿರಿಜಾಕಲ್ಯಾಣವನ್ನು ಗುರುಕರುಣದಿಂದ, ಪಂಪಾಪುರದರಸು ವಿರೂಪಾಕ್ಷನಾಜ್ಞೆಯಿಂದ, ಭಕ್ತಿಯಿಂದ, ಮಹೋತ್ಸವದಿಂದ ವಿಸ್ತಾರವಾಗಿ ಹರೀಶ್ವರನು ಹೇಳುತ್ತಾನೆ. ಆಜ್ಞೆ ಈಶ್ವರನದು, ಕರಣೆ ಗುರುವಿನದು, ಉತ್ಸಾಹ ತನ್ನದು – ಇದರಲ್ಲಿ ಅವನಿಗೆ ಸಂದೇಹವಿಲ್ಲ. ಆದ್ದರಿಂದಲೆ ಅವನ ಕಾವ್ಯ "ಕೂರ್ತ ಮುಗ್ಧೆಯ ಕಡು ನೇಹದಂತಷ್ಟೆ" ಅಲ್ಲದೆ 'ಪುಣ್ಯತತಿಯಂತೆ', 'ಪ್ರಿಯವಚದಂತೆ', 'ಮರಾಳನಂತೆ', 'ಭುವನೈಕಘಾಸುರ', 'ಪಾವನನವ್'. ಅಷ್ಟೆ ಅಲ್ಲ ಅದು 'ಸಂಸಾರ ವಿಶ್ರಾಮದೇಶಂ 'ಶುಭಂ' 'ನಿರತಿಶಯಪದಂ' ಆಗುತ್ತದೆ. ಹರಿಹರ ಭವದ ತುಯ್ತದ ಅನುಭವವಿಲ್ಲದ ಶಿವಭಕ್ತನಲ್ಲ. ಆ ಎಲ್ಲ ತುಯ್ತಗಳಲ್ಲಿದ್ದೂ ಆದರಿಂದ ವಿಶ್ರಮಿಸಿ ಕೊಳ್ಳಲು ಶಿವಾರಾಮಕ್ಕೆ ಕಾವ್ಯಾರಾಮಕ್ಕೆ ಸಹಜವಾಗಿಯೇ ಯಾತ್ರೆ ಹೋಗುವ ಕವಿ.

ಶಿವಗಣದ ರಗಳೆಗಳು ಹರಿಹರನ ವ್ಯಕ್ತಿತ್ವ ಸಿದ್ಧಿಯ ಪತಾಕೆಗಳು. ಶತಕಗಳಲ್ಲಿ ಹರಿಹರ ದೇವನು ತನ್ನ ಭಕ್ತಿ ತನ್ಮಯತೆಯನ್ನು ಬೇರೆ ಬೇರೆ ಭಂಗಿಗಳಲ್ಲಿ, ಬೇರೆ ಬೇರೆ ಹಂತಗಳಲ್ಲಿ ತಾನೇ ನೇರವಾಗಿ ಹೇಳಿದರೆ ರಗಳೆಗಳಲ್ಲಿ ಬೇರೆ ಬೇರೆ ಶರಣರ ಮೂಲಕ ಈ ಭಕ್ತಿ ಪ್ರಕಟವಾಗುತ್ತದೆ. ಆಯಾಶರಣರ ಮನೋಧರ್ಮದ ಕಳೆಯನ್ನು ಅದು ಪಡೆಯುತ್ತದೆ. ಆದರ ಹಿಂದೆ ಹರಿಹರನ ಉತ್ಸಾಹದ ಬುಗ್ಗೆಯಂತೂ ನಿರಂತರವಾಗಿ ಚಿಮ್ಮುತ್ತದೆ. ಶಿವ ಶರಣರ ಭಕ್ತಿಯೋ ಒಬ್ಬೊಬ್ಬರದು ಒಂದೊಂದು ತರ, ವೈವಿದ್ಯಮಯ. ಭಕ್ತಿ ವೈವಿದ್ಯವಿದ್ದರೂ ಅವರೆಲ್ಲರ ಗುರಿ ಒಂದೇ, ಅದು ಶಿವ ಸಾಕ್ಷಾತ್ಕಾರ. ಅದಕ್ಕೋಸ್ಕರವೇ ಕಡುನಿಷ್ಠೆ ಕಡು ನೇಮ. ಅವರು ಯಾವ ಪರೀಕ್ಷೆಗೂ ಹಿಂದೆಗೆಯುವವರಲ್ಲ, ಶಿವ ಕೈಹಿಡಿದೆತ್ತಿಕೊಳ್ಳುವಂತೆ ನಡೆದುಕೊಂಬರು. ಇವರ ಅಂತರಂಗದ ತುಮುಲ, ಕಡುನಿಷ್ಠೆ, ಭಕ್ತಿಭಾವ ಸ್ವತಃ ಭಕ್ತನಾದ ಕವಿಯಾದ ಹರಿಹರನಿಗೆ ಸ್ವಯಂವೇದ್ಯ. ಆದ್ದರಿಂದಲೇ ಹರಿಹರನ ರಗಳೆಗಳು ರಸದ ಚಿಲುಮೆಗಳು, ಭಕ್ತಿಯ ಬುಗ್ಗೆಗಳು.

"ಬಸವ ರಾಜ ದೇವರ ರಗಳೆ" ಕವಿಯ ಭಕ್ತಿ ವಿಲಾಸಕ್ಕೆ ಸಮೃದ್ಧವಾಗಿ ಅವಕಾಶಗಳನ್ನು ಒದಗಿಸಿದೆ. 'ಭಕ್ತಿಭಂಡಾರಿ' ಬಸವಣ್ಣನವರ ಭಕ್ತಿ ಪೂರ್ಣವಾದ ಪೂಜೆಯ ವರ್ಣನೆಗೆ ಇಡಿ ಒಂದು ಸ್ಥಳವನ್ನೇ (ಮೂರನೆಯಸ್ಥಳ) ಮೀಸಲಾಗಿರಿಸಿದ್ದಾನೆ ಹರಿಹರ. 'ಪ್ರಭಾತಸಮಯಕ್ಕೆ ಮುನ್ನವೆ ಎದ್ದು' ಭಸ್ಮೊದ್ಧೂಳನಂಗೈದು ಸಂಗಂಗೆ ಸಾಷ್ಟಾಂಗ ವೆರಗಿ, ಅಗ್ಘವಣಿಯ ಕಂಪಿಗೆ ನಲಿದು ಮೈಯಿಕ್ಕಿ ಅಭಿಷೇಕಕ್ಕೆ ನೀರನ್ನು ತರಲೆಂದು ಬರುತ್ತಾ ದೂರದಲ್ಲಿ ಹೂದೋಟವನ್ನು ಕಂಡು "ಅಳಿಯೆರಗದನಿಲನಲುಗದ ರವಿಕರಂ ಪುಗದ" ಬಗೆ ಬಗೆಯ ಹೂಗಳನ್ನು ಕೊಂಡು ನದಿಗೈತಂದು ಭಕ್ತಿರಸದಲ್ಲಿ ಶೋಧಿಸಿದ ಶೀತೋದಕವನ್ನು ತುಂಬಿ ಕೊಂಡು ಶಿವನಿಲಯಕ್ಕೆ ಬರುತ್ತಾನೆ ಬಸವಣ್ಣ.

ಬರವನೆಳೆಸಿರ್ದಯ್ಯ ದೇವತಳುವಿದೆನೆಂದು
ಉರವಣಿಸಿ ಬರುತಿರ್ದ ತಂದೆ ಮುಳಿಯ
ದಿರೆಂದು

ಎಂದು ತಾನು ಬರುವುದು ತಡವಾಯಿತೇನೋ ಎಂಬ ಭೀತಿಯಿಂದ ಶಿವನನ್ನು ಪ್ರಾರ್ಥಿಸುತ್ತಾ ಅಗ್ಘವಣಿಯನ್ನು ಕೆಳಗಿಳಿಸಿ ಪೂಜೆಯನ್ನು ಪ್ರಾರಂಭಿಸುತ್ತಾನೆ. ಸಿರಿಗಂಧದಿಂದ ಅಲಂಕರಿಸಿ, ಪುಷ್ಪದಿಂದ ಸಿಂಗರಿಸಿ ಪೂಜೆಯನ್ನು ಮಾಡುತ್ತಾನೆ. ಆದೆಷ್ಟು ಬಗೆಯಲ್ಲಿ ಪೂಜಿಸಿದರೂ ಆತನಿಗೆ ಸಮಾಧಾನವಿಲ್ಲ. "ಪೂಜೆಯಂ ನೋಡಿ ಮೆಚ್ಚದೆ ಪೂಜೆಯಂ ಮಾಡಿ" ಮತ್ತೆ ಮತ್ತೆ ಅದನ್ನು ನೋಡುತ್ತಾನೆ.

ನಯನ ಗಳೊಳು ಪೂಜೆ ಬರೆದಂತೆ ನೋಡುತುಂ
ಭಯ ಭಕ್ತಿಯಂ ಪೂಜೆ ಮೆರೆವಂತೆ ಮಾಡುತುಂ
ಚಿತ್ತದೊಳು ಪೂಜೆಯಚ್ಚೊತ್ತಿದಂತರ್ಚಿಸುತೆ
ಚಿತ್ತದೊಳು ಪೂಜೆ ಪುಟ್ಟಿರ್ದಂತೆ ಈಕ್ಷಿಸುತೆ

ಧೂಪ ದೀಪಗಳನ್ನು ಸಮರ್ಪಿಸುತ್ತಾನೆ. ನವ ಶಾಕ ಪಾಕಗಳ ಪ್ರಸಾದವನ್ನು ಎಡೆ ಮಾಡುತ್ತಾನೆ. ನಡುವೆ ಜವನಿಕೆವಿಡಿದು ಹೊರಗೆ ಕೈಮುಗಿದು ಶಿವನನ್ನು ಆರೋಗಿಸುವಂತೆ ಪ್ರಾರ್ಥಿಸುತ್ತಾನೆ. ಮಂಗಳ ವಾದ್ಯಗಳ ಮಧ್ಯದಲ್ಲಿ ಶಿವ ಆರೋಗಣೆಯನ್ನು ಮಾಡುತ್ತಾನೆ. ಅನಂತರ ಅವನ ಕೈತೊಳೆಯಲು ನೀರನ್ನು ಕೊಟ್ಟು, ಕೈಘಟ್ಟಿಯನ್ನು ಕೊಟ್ಟು ಕಂಪಾದ ಕರ್ಪೂರದ ವೀಳೆಯವನ್ನು ಕೊಟ್ಟು, ಚಾಮರ ಸೀಗುರಿಯನ್ನಿಕ್ಕಿ ಉಪಚರಿಸುತ್ತಾನೆ. ಇಲ್ಲಿ ಪೂಜೆ ಮಾಡುತ್ತಿರುವವನು ಬಸವಣ್ಣನೆಂದು ಕವಿ ಹೇಳುತ್ತಿದ್ದರೂ ಅದು ಹರಿಹರನದೇ ಪೂಜೆ ಎನ್ನುವುದು, ಸಾಕಾರ ಭಕ್ತಿ ನಿಷ್ಠೆ ಉತ್ಸಾಹಸ್ಪರ್ಶದಿಂದ ಸ್ಪಷ್ಟವಾಗುತ್ತದೆ.

ಒಬ್ಬೊಬ್ಬ ಶರಣನಲ್ಲಿ ಒಂದೊಂದು ಹೊಸ ಕಳೆಯನ್ನು ಪಡೆದು ಭಕ್ತಿ ನಿತ್ಯನೂತನವಾಗಿ ನಳನಳಿಸುತ್ತದೆ. ಕಾರಿಕಾಲಮ್ಮೆಯಲ್ಲಿ ಒಂದು ಬಗೆಯಾದರೆ, ಮಾದಾರ ಚೆನ್ನಯ್ಯನಲ್ಲಿ ಇನ್ನೊಂದು ರೀತಿ. ಬೇಡರ ಕಣ್ಣಪ್ಪನಲ್ಲಿ ಬರುವ ಸೊಗಸೇ ಬೇರೆ. ಹೀಗೆ ರುದ್ರ ಪಶುಪತಿ, ಅತಿಭಕ್ತ, ಕುಂಬರ ಗುಂಡಯ್ಯ ಕಲಿಕಾಮದೇವ – ಇತ್ಯಾದಿ ಅಸಂಖ್ಯಾತ ಶರಣರ ಭಕ್ತಿ ಸಾಧನೆಯಲ್ಲಿ ತನ್ನ ತನವನ್ನು ಅಚ್ಚೊತ್ತಿದ್ದರೂ, ವೈವಿಧ್ಯವನ್ನು, ನಿತ್ಯ ನೂತನತೆಯನ್ನು ಸಾಧಿಸಿರುವ ಅಸದೃಶ ಸಾಮರ್ಥ್ಯದಿಂದ ಹರಿಹರ ಭಕ್ತಿ ಪ್ರಪಂಚದ ಅಗ್ರಗಣ್ಯ ಕವಿಗಳ ಮೊದಲ ಸಾಲಿನಲ್ಲಿ ನಿಲ್ಲುತ್ತಾನೆ.

ಹರಿಹರನ ಭಕ್ತಿಯಲ್ಲಿ ಎದ್ದುಕಾಣುವ ಅಂಶವೆಂದರೆ ಸಾಕಾರ ನಿಷ್ಠೆಯ ಅದಮ್ಯ ಉತ್ಸಾಹ. ಇಲ್ಲಿ ಶಿವ ಕೇವಲ ತಾತ್ವಿಕವಾದ ಆಂತರಿಕ ಶಕ್ತಿಯಾಗಿ ಉಳಿದಿಲ್ಲ. ಆತ ಶರಣರು ನೆನೆದೊಡನೆ ಅವರ ಬಳಿಗೆ ಇಳಿದು ಬರುವ ಮಾನವೀಯ ಮೂರ್ತಿಯಾಗಿದ್ದಾನೆ. ಉದ್ದಕೂ ಅವನ ಭಕ್ತಿಯಲ್ಲಿ ಕಾಣುವುದು ಸಾಕಾರ ಲೀಲೆಯೇ. ನಿರ್ಗುಣ ನಿರಾಕಾರ ಭಕ್ತಿಯು ಧ್ಯಾನಲೀನ ಸ್ಥಿತಿಯನ್ನು ಆತನಲ್ಲಿ ಕಾಣಲಾಗುವುದಿಲ್ಲ. ಇದಕ್ಕೆ ಸ್ವಲ್ಪ ಮಟ್ಟಿಗೆ ಅಪವಾದಾತ್ಮಕವೋ ಎಂಬಂತೆ ಮಹಾದೇವಿಯಕ್ಕನ ರಗಳೆಯಲ್ಲಿ ಒಂದು ಕಡೆ ಇಷ್ಟಲಿಂಗ ಪೂಜಾನಿಷ್ಠೆ ಕಂಡು ಬರುತ್ತದೆ. ಅಲ್ಲಿ ಕರತಳ ಲಿಂಗದಿಂದ ಅಂತರಂಗದ ಒಳಗೆ ಭಕ್ತಿ ಹೋಗುತ್ತದೆ.

"ಹೊರಗೆ ಕುಸುಮದ ಪ್ರಭಾಳಿ ಒಳಗೆ
ಪರಿಮಳ ಪ್ರಭಾಳಿ
ಮೆರೆದು ಬೆಳಗುತಿರ್ಪುದಲ್ಲಿ ರತ್ನರಂಜಿತ
ಪ್ರಭಾಳಿ"

ಎಂದು ಹೇಳುತ್ತಾ, ಅದು ಹಾಗೇ ಮುಂದುವರಿದು ಕರತದಲ್ಲಿದ್ದ ಲಿಂಗಭಾವದಲ್ಲಿ ನಿಲ್ಲುತ್ತದೆ, ತನ್ನ ರೂಪ ಲಿಂಗದೊಳಗೆ ಹೊಳೆದು ತೋರುತ್ತದೆ

"ತನ್ನ ರೂಪು ಲಿಂಗದೊಳಗೆ ಲಿಂಗರೂಪ
ಹೃದಯದೊಳಗೆ
ಭಿನ್ನವಿಲ್ಲದುಭಯದೊಳಗೆ ತೋರಲರ್ಚಿ
ಸುತ್ತಿಯೊಳಗೆ"

ಹೀಗೆ ಆ ಅರ್ಚನಾ ಪ್ರಭಾವದಲ್ಲಿ ಶಂಭು ತೊಳಗಿ ಬೆಳಗುತ್ತಾನೆ. ಈ ಅಂತರಿಕ ಭಕ್ತಿ ಒಂದು ಕ್ಷಣಮಾತ್ರ ಮಿಂಚಿ ಮರೆಯಾಗುತ್ತದೆ. ಮುಂದೆ ಮತ್ತೆ ಗದ್ಗದ ಪುಳಕಾದಿಗಳು, ಉತ್ಸಾಹದ ಪ್ರಸಾದ ಸಮರ್ಪಣೆ, ತುಪ್ಪದೊಳಗೆ ಸಿದ್ಧವಾದ ಓಗರವನ್ನು ಶಿವನಿಗೆ ತಿನ್ನಿಸುವ ಸಂಭ್ರಮಗಳು ಬರುತ್ತವೆ. ಆ ಉತ್ಸಾಹವನ್ನು ತಡೆದುಕೊಳ್ಳಲಾರ. ಶರಣರ ಸಾಧನೆಯ ಹಿನ್ನಲೆಯಲ್ಲಿ ಅದಕ್ಕನುಗುಣವಾಗಿ ಬರುವ ಘಟನೆಗಳಲ್ಲಿ, ಸನ್ನಿವೇಶಗಳಲ್ಲಿ ಮನೋಧರ್ಮಗಳಲ್ಲಿ ಏನೇ ವ್ಯತ್ಯಾಸವಿದ್ದರೂ ಎಲ್ಲರಗಳೆಗಳಲ್ಲೂ ಕಂಡು ಬರುವ ಸಮಾನ ಧರ್ಮವೆಂದರೆ ಹಿಂದಾಗಲೇ ಹೇಳಿದಂತೆ ಭಕ್ತಿ ಪ್ರತಿಪಾದನೆ, ಭಾವುಕತೆ ಮತ್ತು ಪರಿಶುದ್ಧ ಹೃದಯದ ತನ್ಮಯತೆಯಿಂದ ಮೂಡಿ ಬಂದ ಉತ್ಸಾಹ. ಈ ವಲಯದಲ್ಲಿ ಇವನ ಸಾಕಾರನಿಷ್ಠೆ ಕೆಲಸಮಾಡಿ ಸಗುಣ ಭಕ್ತಿಯ ಮಾಂತ್ರಿಕ ಜಗತ್ತನ್ನು ಕಲಾತ್ಮಕವಾಗಿ ಸೃಷ್ಟಿಸಿದೆ.

ಹರಿಹರನ ದರ್ಶನವನ್ನು ನಾವು ಕಂಡುಕೊಳ್ಳಬೇಕಾದದ್ದು ಇಲ್ಲಿಯೇ. ಅವನು ನಿರ್ಮಿಸಿದ ಶಿವಭಕ್ತಿ ಪ್ರಪಂಚದಲ್ಲಿ ಭಿನ್ನ ಭಿನ್ನ ವ್ಯಕ್ತಿತ್ವದಿಂದ ಮನೋಧರ್ಮದಿಂದ ಕೂಡಿದ ಶರಣರನ್ನು ಭಕ್ತಿ ಸೂತ್ರದಿಂದ ಪೋಣಿಸಿ ವೈವಿಧ್ಯಮಯವಾದ ಪುಷ್ಪಹಾರವೊಂದನ್ನು ನಿರ್ಮಿಸಿ ಶಿವನಡಿಗೆ ಸಮರ್ಪಿಸಿದ ಈ ಮಹಾಭಕ್ತನ ಜೀವನವೇ ಒಂದು ದಾರ್ಶನಿಕ ಸಂದೇಶವಾಗಿದೆ. ಆತ ಅಲ್ಪಸುಖಗಳಿಗಾಗಿ ಲೌಕಿಕವನ್ನು ಆಶ್ರಯಿಸದೆ ಈ ಪ್ರಲೋಭನೆಗಳನ್ನು ಮೀರಿ ಹಂಪೆಯರಸನಿಗೆ ತನ್ನನ್ನು ಅರ್ಪಿಸಿಕೊಂಡವನು. ಈ ಮೂಲಕ ಅವನು ಪ್ರತಿಬಿಂಬಿಸಿದ ದರ್ಶನವೂ ಇದೇ.

ಶಿವ ಒಲಿಯುವುದು ಹೊರಗಿನ ಆಡಂಬರಕ್ಕಲ್ಲ ಸಂಪತ್ತಿಗಲ್ಲ, ಕೀರ್ತಿಗಲ್ಲ, ಅಂತರಂಗದ ಶುದ್ಧಿಗೆ, ನಿಷ್ಠೆಗೆ, ಸರಳತೆಗೆ. ಇವನ್ನು ಹಲವು ಪರಿಯಲ್ಲಿ ಹಲವು ಪಾತ್ರಗಳ ಮೂಲಕ ನಿರೂಪಿಸಿದ್ದಾನೆ. ರುದ್ರ ಪಶುಪತಿ, ಕೋಳೂರು ಕೊಡಗೂಸು ಬೇಡರ ಕಣ್ಣಪ್ಪ–ಮೊದಲಾದವರಲ್ಲಿ ಇದು ಮುಗ್ಧ ಭಕ್ತಿಯ ರೂಪವನ್ನು ತಾಳಬಹುದು ಓಹಿಲಯ್ಯ, ಕರಿಕಾಲಮ್ಮೆ, ತಿರುನೀಲಕಂಠ ಇವರಂತೆ ಉಗ್ರನಿಷ್ಠೆಯನ್ನು ತಳೆಯಬಹುದು ; ಉದ್ಭಟ, ಹಲಾಯುಧ, ಮಳೆಯ ರಾಜರಂತೆ ಇಡೀ ಲೋಕವನ್ನೇ ಕೈಲಾಸಕ್ಕೊಯ್ಯುವ ಲೋಕಾನುಕಂಪೆಯಾಗಬಹುದು. ಬಸವರಾಜನಂತೆ ಮರ್ತ್ಯಕ್ಕೆ ಕೈಲಾಸವನ್ನಿಳಿಸುವ ದೈವೀಸಾಧನೆಯಾಗಬಹುದು, ಅಯನಾರ, ಕುಂಬಾರಗುಂಡ, ಅತಿಭಕ್ತ, ತಿರುಕುರುಂಪೆತೊಂಡರಂತೆ ಕಾಯಕನಿಷ್ಠೆಯೇ ಆಧ್ಯಾತ್ಮಿಕವಾಗಬಹುದು. ಹೀಗೆ ಸಾಧಕರ ಜೀವನದ ನೂರಾರು ಮುಖಗಳಲ್ಲಿ ಜೀವನದ ಸಮಗ್ರ ದರ್ಶನವನ್ನು ಹಿಡಿದಿಡಲು ಸಮರ್ಥನಾಗಿದ್ದಾನೆ; ಈ ವ್ಯಾಪಕವಾದ ಅರ್ಥದಲ್ಲಿ ದಾರ್ಶನಿಕ ಕವಿಯಾಗಿ ಪರಿಣಮಿಸಿದ್ದಾನೆ.

ಹೀಗೆ ಹರಿಹರನ ರಗಳೆಗಳು ಮುಖವಾಗಿ ಭಕ್ತಜೀವನದ ಅಂತರಂಗದ ಕೈಪಿಡಿಗಳು. ಅವನ ದರ್ಶನಕ್ಕೆ ನಿದರ್ಶನವಾಗಿ ಒಡ್ಡಿದ ಕಥಾ ಪ್ರತಿಮೆಗಳು, ಕನ್ನಡ ಸಾಹಿತ್ಯದಲ್ಲಿ ಥಳ ಥಳಿಸುವ ಅಮೃತ ಕಳಶಗಳು.

---

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು

* ಸರತಿಯ ಸಾಲಿನ ಕೋಣೆಗಳಲ್ಲಿ ಕಾಫಿಬೋರ್ಡ್‌ನವರ ಅಲ್ಪಾಹಾರ ಸೌಲಭ್ಯ.

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7–ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ. ಗೋವಿಂದ ಪ್ರಸಾದ ಕ್ಯಾಂಟೀನ್,

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ. ಹಾಗೂ ಉಚಿತ ಬಸ್ ಸೌಕರ್ಯ.

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ

* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಸಿ . ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8–30 ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೇ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯವರೆಗೆ ಕೆಲಸಮಾಡುತ್ತದೆ.

# ಶ್ರೀ ವಾದಿರಾಜ ಕನಕದಾಸ ಸಂಗೀತೋತ್ಸವ

ಶ್ರೀ ವಾದಿರಾಜ ಕನಕದಾಸ ಮಹೋತ್ಸವ ಸಮಿತಿಯವರು ಉಡುಪಿಯಲ್ಲಿ ಕರ್ನಾಟಕ ಸಂಗೀತ ನೃತ್ಯ ಅಕ್ಯಾಡಮಿ, ಉಡುಪಿಯ ಮಹಾತ್ಮಾ ಗಾಂಧಿ ಮೆಮೋರಿಯಲ್ ಕಾಲೇಜು, ತಿರುಪತಿಯ ದಾಸಸಾಹಿತ್ಯ ಪ್ರಾಜೆಕ್ಟ್‌ಗಳ ನೆರವಿನಿಂದ ಡಿಸೆಂಬರ್ 10, 11, 12, 1982 ರಲ್ಲಿ ಶ್ರೀ ವಾದಿರಾಜರ ಕನಕದಾಸ ಸಂಗೀತೋತ್ಸವನ್ನು ಆಚರಿಸಿದರು.

ದಿನಾಂಕ 10-12-1982 ರ ಶುಕ್ರವಾರ ಸಂಜೆ ಸುಬ್ರಹ್ಮಣ್ಯಮಠದ ಶ್ರೀಶ್ರೀ ವಿದ್ಯಾಭೂಷಣ ತೀರ್ಥ ಸ್ವಾಮೀಜಿಯವರು ವಾದಿರಾಜ ಹಾಗೂ ಕನಕದಾಸರ ಸಾಹಿತ್ಯ, ಸಂಗೀತ, ಧರ್ಮ ಸಂಸ್ಕೃತಿಗಳ ರಂಗಗಳಲ್ಲಿನ ಸೇವೆಯನ್ನು ಕೊಂಡಾಡುತ್ತ ಉತ್ಸವವನ್ನು ಉದ್ಘಾಟಿಸಿದರು. ಜೊತೆಗೇ ಮಠಾಧಿಪತಿಗಳಲ್ಲಿ ಸಂಗೀತ ವಿದ್ವಾಂಸರಾದ



ವಿಚಾರ ಗೋಷ್ಠಿಯ ಸಭಾಂಗಣ ; ಎಡಕಡೆಯವರು ಸರ್ವಶ್ರೀ ಡಾ॥ ನಾಗರಹಳ್ಳಿ ಆಚಾರ್ಯ, ಪಂಡರೀನಾಥಾಚಾರ್ಯ ಗಲಗಲಿ, ಶ್ರೀನಿವಾಸ ಹಾವನೂರ.

## ಕರ್ನಾಟಕದರ್ಶಿ

ಅವರು ತಮ್ಮ ಸುಶ್ರಾವ್ಯ ಕಂಠದಿಂದ ವಾದಿರಾಜರ ಹಾಗೂ ಕನಕದಾಸರ ಹಾಡುಗಳನ್ನು ಹಾಡಿ ಸಭಿಕರನ್ನು ಸಂಗೀತದ ಆನಂದದಲ್ಲಿ ತೊಡಗಿಸಿದರು. ಅಂದು ರಾತ್ರಿ 9-30 ಕ್ಕೆ ಸಂಗೀತ ವಿದ್ವಾನ್ ಶ್ರೀ ಆರ್. ಕೆ. ಶ್ರೀಕಂಠನ್ ಅವರು ತಮ್ಮ ವೃಂದದವರೊಂದಿಗೆ ಸಂಗೀತಸುಧೆಯನ್ನು ಉಣಬಡಿಸಿದರು.

ಹನ್ನೊಂದರಂದು ಶನಿವಾರ ಬೆಳಗ್ಗೆ ಹಿರಿಯ ಪ್ರಾಥಮಿಕ ಶಾಲೆಯ ವಿದ್ಯಾರ್ಥಿಗಳಲ್ಲಿ, ಪ್ರೌಢ ಶಾಲಾ ವಿದ್ಯಾರ್ಥಿಗಳಲ್ಲಿಯೂ ವಾದಿರಾಜರ, ಕನಕದಾಸರ ಸಂಗೀತ ಸ್ಪರ್ಧೆ ಏರ್ಪಡಿಸಲಾಗಿತ್ತು. ಬಹುಮಂದಿ ವಿದ್ಯಾರ್ಥಿಗಳು ಆಸಕ್ತಿಯಿಂದ ಭಾಗವಹಿಸಿದರು. ಮಧ್ಯಾಹ್ನ ಸಾರ್ವಜನಿಕರು ಹಾಗೂ ಕಾಲೇಜು ವಿದ್ಯಾರ್ಥಿಗಳಲ್ಲಿ ಇದೇ ಸ್ಪರ್ಧೆ ಏರ್ಪಾಡಾಗಿದ್ದಿತು.

ಅಂದು ಸಂಜೆ ಅಂಬಲಪಾಡಿಯ ಶ್ರೀಜನಾರ್ದನ ಮಹಾಕಾಳಿ ದೇವಸ್ಥಾನದವರವತಿಯಿಂದ ಶ್ರೀ ಕೃಷ್ಣದಾಸ ಮುರುಗೋಡ ಅವರು ಹರಿಕಥೆಯನ್ನು ಮಾಡಿದ ನಂತರ ಶ್ರೀಮತಿ ಶಾಂತ. ಎಸ್. ಪ್ರೋತಿ ಮತ್ತು ವೃಂದದವರಿಂದ ಹಿಂದೂಸ್ತಾನಿ ಸಂಗೀತ ಕಛೇರಿ ನಡೆಯಿತು.

ಹನ್ನೆರಂದು ಭಾನುವಾರ ಬೆಳಗ್ಗೆ ತಿರುಪತಿಯ ದಾಸಸಾಹಿತ್ಯ ಪ್ರಾಜೆಕ್ಟ್‌ವತಿಯಿಂದ ವಾದಿರಾಜ-ಕನಕದಾಸ ವಿಚಾರ ಗೋಷ್ಠಿ. ಅಧ್ಯಕ್ಷಸ್ಥಾನದಲ್ಲಿ ನಿಂತ ಶ್ರೀ ಬನ್ನಂಜೆ ಗೋವಿಂದಾಚಾರ್ಯರು ವಾದಿರಾಜರ ತತ್ತ್ವಜ್ಞಾನದ ಬಗ್ಗೆ ನಿರರ್ಗಳವಾಗಿ ಮಾತನಾಡಿದರು. ದಾಸಸಾಹಿತ್ಯ ಪ್ರಾಜೆಕ್ಟ್ ವತಿಯಿಂದ ಶ್ರೀ ಕೆ. ವಾದಿರಾಜ ಅವರು ಮಾತನಾಡಿ ದಾಸಸಾಹಿತ್ಯ ಪ್ರಾಜೆಕ್ಟ್‌ನ ಪರಿಚಯ, ಉದ್ದೇಶಗಳನ್ನು ವಿವರಿಸಿ ಸಾರ್ವಜನಿಕರು ಹೆಚ್ಚು ಹೆಚ್ಚು ತೊಡಗಿಸಿಕೊಳ್ಳುವುದರ ಮೂಲಕ ತಿರುಪತಿ ಶ್ರೀ ವೆಂಕಟೇಶ್ವರನ ಕೃಪೆಗೆ ಪಾತ್ರರಾಗಿ ಹಿಂದೂ ಧರ್ಮ ಸೌರಭವನ್ನು ಹರಡುವಲ್ಲಿ ನೆರವಾಗಬೇಕೆಂದರು.

ವಾದಿರಾಜರ ಕೃತಿಗಳಲ್ಲಿನ ಜೀವನ ಸೌಂದರ್ಯವನ್ನು ಕುರಿತು ಶ್ರೀಶ್ರೀನಿವಾಸ ಹಾವನೂರರೂ, ಕಾವ್ಯಸೌಂದರ್ಯವನ್ನು ಕುರಿತ ಶ್ರೀ ಪಂಡರೀನಾಥಾಚಾರ್ಯ ಗಲಗಲಿಯವರೂ ಸಮಾಜ-ನೀತಿಯನ್ನು ಕುರಿತು ಡಾ॥ ನಾಗರಹಳ್ಳಿ ಆಚಾರ್ಯರೂ ತಮ್ಮ ಪ್ರಬಂಧಗಳನ್ನು ಮಂಡಿಸಿದರು.

ಅಂದು ಸಂಜೆ ಕುಮಾರಿ ರಾಜಲಕ್ಷ್ಮಿ ಹಾಗೂ ಕುಮಾರಿ ಪುಷ್ಪಲತಾ ಅವರಿಂದ ಸಂಗೀತ ಕಾರ್ಯಕ್ರಮದ ನಂತರ ಉತ್ಸವದ ಸಮಾರೋಪ ಕಾರ್ಯಕ್ರಮವಿದ್ದಿತು. ಬೆಳಗ್ಗೆ ವಿಚಾರಗೋಷ್ಠಿಯಲ್ಲಿ ಭಾಗವಹಿಸಿದ ಶ್ರೀ ಶ್ರೀ ವಿಶ್ವೇಶತೀರ್ಥಸ್ವಾಮಿಜಿ ಸಮಾರೋಪದ ಅಧ್ಯಕ್ಷತೆವಹಿಸಿದ್ದರು ಹಾಗೂ ಶ್ರೀ ಶ್ರೀ ವಿದ್ಯಾಭೂಷಣ ತೀರ್ಥಸ್ವಾಮಿಗಳು ಉಪಸ್ಥಿತರಿದ್ದರು.

ರಾತ್ರಿ 9-30 ಕ್ಕೆ ಮೈಸೂರಿನ ಶ್ರೀಮತಿ ನಾಗಮಣಿ ಶ್ರೀನಾಥ್ ಅವರು ತಮ್ಮ ವೃಂದದವರೊಡನೆ ಸುಶ್ರಾವ್ಯ ಸಂಗೀತದ ಔತಣವನ್ನು ಉಣಬಡಿಸಿದರು.

ಶ್ರೀವಾದಿರಾಜ ಕನಕದಾಸ ಮಹೋತ್ಸವಗಳು ಕಳೆದ ಐದು ವರ್ಷಗಳಿಂದ ಉಡುಪಿಯಲ್ಲಿ ನಡೆಯುತ್ತಿದ್ದು, ದಾಸಸಾಹಿತ್ಯ ಪ್ರಾಜೆಕ್ಟ್ ಎರಡನೆಯ ಬಾರಿ ಇದರಲ್ಲಿ ಭಾಗವಹಿಸುತ್ತಿದೆ. ★



ಭಾಷಣ ಮಾಡುತ್ತ ಸರ್ವಶ್ರೀ ಬನ್ನಂಜೆ ಗೋವಿಂದಾಚಾರ್ಯ, ಕೆ. ವಾದಿರಾಜ.

## ಗೀತಾ ಜಯಂತಿ ಸಪ್ತಾಹ

ತಿರುಮಲೆ–ತಿರುಪತಿ ದೇವಸ್ಥಾನಗಳ ಹಿಂದೂ ಧರ್ಮ ರಕ್ಷಣ ಸಂಸ್ಥೆಯ ನೇತೃತ್ವದಲ್ಲಿ ಕಳೆದ ಡಿಸೆಂಬರ್ 20 ರಿಂದ 26 ರವರೆಗೆ ಗೀತಾಜಯಂತಿ ಸಪ್ತಾಹ ನಡೆಯಿತು. ಏರ್ಪೇಡ್‌ನ ಶ್ರೀ ವ್ಯಾಸಾಶ್ರಮದ ಪೀಠಾಧಿಪತಿ ಶ್ರೀ ವಿದ್ಯಾಪ್ರಕಾಶಾನಂದ ಗಿರಿ ಸ್ವಾಮಿಗಳವರು ಪ್ರತಿದಿನ ಸಂಜೆ ಆರುಗಂಟೆಯಿಂದ ಎಂಟುಗಂಟೆಯವರೆಗೆ ತಿರುಪತಿಯ ಅನ್ನಮಾಚಾರ್ಯ ಕಲಾಮಂದಿರದಲ್ಲಿ ಈ ಕಾರ್ಯಕ್ರಮವನ್ನು ಗೀತಾ ಪ್ರವಚನದ ಮೂಲಕ ನಡೆಸಿಕೊಟ್ಟರು. ಪ್ರತಿದಿನವೂ ಬೆಳಗ್ಗೆ ಶ್ರೀ ಮುದಿವರ್ತಿ ಕೊಂಡಮಾಚಾರ್ಯರು ಗೀತಾ ಪಾರಾಯಣ ಪ್ರವಚನಗಳನ್ನು ನಡೆಸಿಕೊಟ್ಟರು.

ಡಿಸೆಂಬರ್ 26 ರಂದು ನಡೆದ ಗೀತಾಜಯಂತಿ ಸಪ್ತಾಹ ಸಮಾರೋಪ ಸಮಾರಂಭದಲ್ಲಿ ಭಾಗವಹಿಸಿದ ಶ್ರೀ ಡಿ. ಸುಬ್ಬರಾಯುಲು ಅವರು (ಸಹ ಕಾರ್ಯನಿರ್ವಹಣಾಧಿಕಾರಿ ತಿ. ತಿ. ದೇ ) ಅವರು ಭಗವದ್ಗೀತೆಯ ಕಿರು ಹೊತ್ತಿಗೆಯನ್ನು ಬಿಡುಗಡೆ ಮಾಡಿದರು. ಭಗವದ್ಗೀತೆ ಮಾಡುವ ಉಪದೇಶವೆಲ್ಲವೂ ಮಾನವನ ಸತ್ಪ್ರವರ್ತನೆಗಾಗಿ ಮಾತ್ರವೇ ಎಂದೂ ಈ ದೈವವಾಣಿ ಸದಾಚಾರ ಸೂತ್ರ ಸಂಹಿತೆ ಎಂದೂ ಅವರು ಅವಧಾರಿಸಿ ತಿಳಿಸುತ್ತ ಈ ಬಗ್ಗೆ ಸಪ್ತಾಹದಲ್ಲಿ ಭಾಗವಹಿಸಿ ಗೀತೆಯ ಮಹಿಮೆ, ಆಚಾರದ ಅವಶ್ಯಕತೆಗಳನ್ನು ದಿನವೂ ವಿವರಿಸಿದ ಶ್ರೀ ಶ್ರೀ ವಿದ್ಯಾನಂದಗಿರಿ ಸ್ವಾಮಿಗಳನ್ನು ತಿ. ತಿ. ದೇ. ಗಳ ಪರವಾಗಿ ಗೌರವಿಸಿದರು. ಭಗವದ್ಗೀತೆಯ ಸಂದೇಶವನ್ನು ಸಕಲ ವರ್ಗದ ಜನರಿಗೂ ಹತ್ತಿರವಾಗುವಂತೆ ಮಾಡಲು ತಿ. ತಿ. ದೇ. ಕೈಗೊಂಡಿರುವ ಅನೇಕ ಪ್ರಯತ್ನಗಳನ್ನು ಶ್ರೀ ರಾವುಲ ಸೂರ್ಯನಾರಾಯಣ ಮೂರ್ತಿ (ಪೌರಸಂಬಂಧಾಧಿಕಾರಿ) ಅವರು ವಿವರಿಸಿದರು.

ವರದಿಯನ್ನು ನೀಡಿದ ಶ್ರೀ ಸಮುದ್ರಾಲ ಲಕ್ಷ್ಮಣಯ್ಯ (ಕಾರ್ಯದರ್ಶಿ, ಹಿಂದೂ ಧರ್ಮ ಧರ್ಮ ರಕ್ಷಣಸಂಸ್ಥೆ) ಅವರು ಸ್ಥಾನಿಕ ಮಲೆಯಾಳ ಸದ್ಗುರು ಸೇವಾಶ್ರಮದವರು ವಿದ್ಯಾರ್ಥಿಗಳಿಗಾಗಿ ಗೀತಾ ವಾಚನ ಸ್ಪರ್ಧೆಗಳನ್ನು ನಡೆಸಿದರೆಂದೂ ಅದರಲ್ಲಿ 400 ಕ್ಕೂ ಮೇಲ್ಪಟ್ಟ ವಿದ್ಯಾರ್ಥಿಗಳು ಭಾಗವಹಿಸಿದರೆಂದೂ ತಿಳಿಸಿದರು. ಈ ಸ್ಪರ್ಧೆಯಲ್ಲಿ ಗೆದ್ದ ವಿದ್ಯಾರ್ಥಿಗಳು ತಮ್ಮ ಗೀತಾ ಗಮಕದಿಂದಾಗಿ ಸಭೆಯಲ್ಲಿ ಶ್ರೋತೃಗಳನ್ನು ಮುಗ್ಧಗೊಳಿಸಿದರು.

# ವಾರ್ತಾಲಹರಿ

## ನಾಟಕೋತ್ಸವ

ತಿರುಪತಿಯ ಶ್ರೀ ವೆಂಕಟೇಶ್ವರ ನಾಟ್ಯ ಕಳಾ ಪರಿಷತ್ತು ತಿ. ತಿ. ದೇ. ಗಳ ಸಹಕಾರದಿಂದ ಆ ಸಂಸ್ಥೆಯ 28 ನೇ ವಾರ್ಷಿಕೋತ್ಸವ ಸಮಯದಲ್ಲಿ ಈಚೆಗೆ ಶ್ರೀ ವೆಂಕಟೇಶ್ವರ ನೃತ್ಯ ಕಲಾಶಾಲೆಯಲ್ಲಿ ನಾಟಕೋತ್ಸವ ಸ್ಪರ್ಧೆಗಳನ್ನು ಏರ್ಪಡಿಸಿದ್ದು, ಈ ಬಾರಿ ಸಾಂಘಿಕ ನಾಟಕಗಳೊಂದಿಗೆ ಪೌರಾಣಿಕ ನಾಟಕಗಳೂ ಹೆಚ್ಚಿನ ಸಂಖ್ಯೆಯಲ್ಲಿ ಸ್ಪರ್ಧೆಯಲ್ಲಿ ಪಾಲುಗೊಂಡಿದ್ದವು.

ಪೌರಾಣಿಕ ನಾಟಕಗಳಲ್ಲಿ ಕಡಪ ಜಿಲ್ಲೆಯ ಸವೇರಾ ಆರ್ಟ್ಸ್ ಅವರು ಪ್ರದರ್ಶಿಸಿದ 'ಸತಿ ಅಹಲ್ಯ' ಪ್ರಥಮ ಬಹುಮಾನವನ್ನೂ, ರೇಪಲ್ಲೆಯ ದುರ್ಗಾ ಕಲಾನಿಕೇತನದವರ 'ಆಂಡಾಳ್ ಕಲ್ಯಾಣಂ' ದ್ವಿತೀಯ ಬಹುಮಾನವನ್ನೂ ಪಡೆದವು. ಬಹುಮಾನ ಪಡೆದ ಇತರರೆಂದರೆ ಉತ್ತಮ ನಟ ಶ್ರೀ ಗುವ್ವಲ ಸುಬ್ಬರಾಯುಡು (ಸತಿಅಹಲ್ಯ) ಉತ್ತಮ ದ್ವಿತೀಯ ನಟ ಶ್ರೀ ಆರ್. ಎಸ್. ಭಾರ್ಗವ ( ಆಂಡಾಳ್ ಕಲ್ಯಾಣಂ ) ಉತ್ತಮ ನಟಿ ಶ್ರೀಮತಿ ಗೂಡೂರು ಸಾವಿತ್ರಿ (ಸತಿಅಹಲ್ಯ) ಉತ್ತಮನಟಿ ಶ್ರೀಮತಿ ಜಯಾನಿರ್ಮಲ್ (ಸತಿ ಸಕ್ಕೂಬಾಯಿ) ಉತ್ತಮ ನಿರ್ದೇಶನ ಶ್ರೀವಲ್ಲೂರಿ ಅವರುಗಳು.

ನಾಟಕೋತ್ಸವದ ಸಮಾರೋಪದ ದಿನ ತಿರುಪತಿಯ ಅಡಿಷನಲ್ ಎಸ್. ಪಿ. ಶ್ರೀ ಆರ್. ಸೀತಾರಾಮರಾವ್ ಅವರ ಅಧ್ಯಕ್ಷತೆಯಲ್ಲಿ ತೆಲುಗು ಸಿನಿಮಾ ನಟ ಶ್ರೀ ಚಿರಂಜೀವಿ ಅವರು ಬಹುಮಾನ ವಿನಿಯೋಗ ಮಾಡಿದರು. ಸಿನಿಮಾ ನಿರ್ದೇಶಕ ಶ್ರೀ ಕೋಡಿರಾಮಕೃಷ್ಣ ಅವರು ಮಾತನಾಡಿದರು.

## ತಿರುಮಲೆಯಲ್ಲಿ ಸರಕಾರ ಭಾವ

ತಿರುಮಲೆಯಲ್ಲಿನ ಯಾತ್ರಿಕರ ಹಿತಗಳನ್ನು ಕಾಪಾಡುವ ತಿ. ತಿ. ದೇ. ಹಾಗೂ ತಿರುಮಲೆಯ ಸ್ಥಾನಿಕ ಜನತೆ ಹಾಗೂ ಪೋಲೀಸರುಗಳಲ್ಲಿನ ಪರಸ್ಪರ ಭಿನ್ನಾಭಿಪ್ರಾಯಗಳು ದೂರವಾಗಿ ಹೊಸದಾದ ಸಹಕಾರಭಾವದಿಂದ ಮುಂದುವರೆಯಲು ಈಚೆಗೆ ಸೇರಿದ ಮೂರು ಕಡೆಯ ಪ್ರತಿನಿಧಿ ಸಭೆಯಲ್ಲಿ ತೀರ್ಮಾನಿಸಲಾಯಿತು.

ತಿರುಮಲೆಯ ನಿವಾಸಿಗಳ ಹಿತಗಳನ್ನು ಕಾಯ್ದುಕೊಳ್ಳುವ ವಿವಿಧ ಸೇವಾ ಸಂಘಗಳ ನಾಯಕರ ಸಭೆಯನ್ನುದ್ದೇಶಿಸಿ ಮಾತನಾಡುತ್ತ ಸ್ವಯಂಸೇವೆಯ ಸಾಮೂಹಿಕ ಪ್ರಯತ್ನ ನಮ್ಮ ಪರಂಪರೆಯಲ್ಲಿ ಪ್ರಧಾನ ಮೌಲ್ಯವೆಂದು ಹೇಳುತ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಕುಮಾರಸ್ವಾಮಿ ರೆಡ್ಡಿ ಅವರು ತಿರುಮಲೆಯಲ್ಲಿ ಜೀವನದ ವಿವಿಧ ಮುಖಗಳ ಅಭಿವೃದ್ಧಿಗಾಗಿ ಸೌಹಾರ್ದತೆ ಹಾಗೂ ನಿಕಟಗಳ ಭಾವನೆಗಳು ಹರಡಬೇಕಾದ ಅಗತ್ಯವಿದೆಯೆಂದು ಅವಧಾರಿಸಿ ಹೇಳಿದರು. ಬೀದಿ ಮಾರಾಟಗಾರರು, ಆಕ್ರಮಣಶೀಲತೆ, ತೊಂಡು ದನಗಳು, ದಳ್ಳಾಳಿಗಳು, ಫೋಟೋಗ್ರಾಫರುಗಳು, ಶ್ರೀವೆಂಕಟೇಶ್ವರಸ್ವಾಮಿಯ ನೆಲೆಯಾದ ತಿರುಮಲೆಯಲ್ಲಿನ ಗುರುತಿಸಲಾಗಿರುವ ಸಮಸ್ಯೆಗಳಿಗೆ ಕಾರಣವೆಂದು ಹೇಳಿದರು. ಹೆಚ್ಚುತ್ತಿರುವ ಯಾತ್ರಿಕರ ವಸತಿ ಅನುಕೂಲಗಳು ಹಾಗೂ ದರ್ಶನದ ಸೌಕರ್ಯಗಳಿಗಾಗಿ ಆಡಳಿತವರ್ಗ ಯಾವಯಾವ ಕ್ರಮಗಳನ್ನು ಕೈಗೊಂಡಿದೆ ಎಂಬುದನ್ನು ವಿವರಿಸಿದ ಅವರು ತಿರುಮಲೆಯ ಗ್ರಾಮನಿವಾಸಿಗಳಿಗಾಗಿ ಇಂಧನವನ್ನು ಸುಲಭದರದಲ್ಲಿ ಒದಗಿಸಲು ಕ್ರಮಗಳನ್ನು ಕೈಗೊಳ್ಳಲಾಗುವುದು ಎಂದರು. ತೊಂಡು ಮೇಯುವ ದನಗಳಿಗಾಗಿ ಪ್ರತ್ಯೇಕ ನೆರಳು ಗೋಮಾಳಗಳನ್ನು ಒದಗಿಸುವುದಾಗಿ ಭರವಸೆ ನೀಡಿದರು. ಬೇರೆ ಬೇರೆ ಸ್ಥಳಗಳಲ್ಲಿ ಯಾತ್ರಿಕರಿಗಾಗಿ ಟ್ಯಾಕ್ಸಿ ಸ್ಟ್ಯಾಂಡ್‌ಗಳನ್ನು ಏರ್ಪಡಿಸುವುದಾಗಿಯೂ ಹೇಳಿದರು. ತಿರುಮಲೆಯ ಗ್ರಾಮ ನಿವಾಸಿಗಳ ಸೌಕರ್ಯ, ಸ್ನಾನಗಳಿಗಾಗಿ ಎಲ್ಲ ಪ್ರಯತ್ನಗಳನ್ನೂ ನಡೆಸಲಾಗುವುದೆಂದೂ ಆಶ್ವಾಸನೆ ನೀಡಿದರು.

ಅಡಿಷನಲ್ ಎಸ್. ಪಿ. ಶ್ರೀ ಆರ್. ಸೀತಾರಾಮರಾವ್ ಹಾಗೂ ತಿ. ತಿ. ದೇ. ಸಹಕಾರ್ಯನಿರ್ವಹಣಾಧಿಕಾರಿ ಶ್ರೀಜಿ. ವೆಂಕಟೇಶ್ವರುಲು ಅವರುಗಳು ದೇವಸ್ಥಾನದ ಉದ್ದೇಶಗಳನ್ನು ಸರಿಯಾಗಿ ಗ್ರಹಿಸುವ ಧೋರಣೆ ಬೆಳಸಿಕೊಳ್ಳಬೇಕೆಂದು ಸಂಘ ಸಂಸ್ಥೆಗಳ ಪ್ರತಿನಿಧಿಗಳಲ್ಲಿ ಕಳಕಳಿಯ ಮನವಿ ಮಾಡಿದರು. ಸರ್ವಶ್ರೀ ಕೆ. ಎಂ. ಕೃಷ್ಣಯ್ಯ, ಕೆ. ರಾಜಗೋಪಾಲ್, ಇ. ವಿ. ಲಕ್ಷ್ಮೀಪತಿ, ಆಕುಲ ಕೃಷ್ಣಯ್ಯ ಮತ್ತಿತರರು ಮಾತನಾಡಿ ಬೀದಿ ಮಾರಾಟಗಾರರಿಗೆ ಲೈಸನ್ಸ್ ನೀಡಲು ಒಂದು ಕಡೆಯ ದಿನಾಂಕವನ್ನು ಗೊತ್ತುಪಡಿಸಬೇಕೆಂದೂ, ಅವರ ಮಾರಾಟದ ಕ್ಷೇತ್ರವನ್ನು ನಿರ್ಧರಿಸಬೇಕೆಂದೂ, ಸಲಹೆಗಳನ್ನು ನೀಡುತ್ತ, ಯಾತ್ರಿಕರ ಸೌಕರ್ಯಗಳಿಗಾಗಿ ತಿ. ತಿ. ದೇ. ಮಾಡುವ ಎಲ್ಲ ಅಭಿವೃದ್ಧಿ ಪ್ರಯತ್ನಗಳನ್ನೂ ಗ್ರಾಮನಿವಾಸಿಗಳು ಸಹೃದಯದಿಂದ ಸ್ವೀಕರಿಸುವ ವಾತಾವರಣ ಮೂಡಿಸುವಲ್ಲಿ ತಾವುಗಳೇ ಯಶಸ್ವಿ ಮಾಧ್ಯಮವಾಗಿ ಕೆಲಸಮಾಡಲು

ಸಿದ್ಧವಿರುವುದಾಗಿ ತಿಳಿಸಿದರು. ಇಂತಹ ಪರಸ್ಪರ ಸೌಹಾರ್ದ ಸಭೆಗಳಿಂದಾಗಿ ಲೋಪದೋಷಗಳನ್ನು ಗುರುತಿಸುವುದೂ, ಸಲಹೆಗಳ ಕೊಡ, ಕೊಳ್ಳುವಿಕೆಯೂ ಆಗುವುದೆಂದು ಅವರೆಲ್ಲ ಅಭಿಪ್ರಾಯ ಪಟ್ಟರು

## ಧರ್ಮಪ್ರಚಾರಕ್ಕಾಗಿ ಗ್ರಾಮದತ್ತತೆ

ತಿ. ತಿ. ದೇ. ಗಳ ಹಿಂದೂ ಧರ್ಮ ರಕ್ಷಣ ಸಂಸ್ಥೆಯು ಚಿತ್ತೂರು ಜಿಲ್ಲೆಯ ಬೊಮ್ಮರಾಜಪಲ್ಲಿ ಗ್ರಾಮವನ್ನು ಧಾರ್ಮಿಕ ಪ್ರಚಾರಕ್ಕಾಗಿ ಕಳೆದ ಡಿಸೆಂಬರ್ ತಿಂಗಳಲ್ಲಿ ದತ್ತು ಸ್ವೀಕರಿಸಿತು. ಹಿಂದೂ ಧರ್ಮ ರಕ್ಷಣಸಂಸ್ಥೆ ಇನ್ನು ಮುಂದೆ ಈ ಗ್ರಾಮದಲ್ಲಿ ಹಿಂದೂ ಧರ್ಮದ ಬಗ್ಗೆ ಜಾಗೃತಿಯನ್ನು ಹೈಂದವ ವೌಲ್ಯಗಳನ್ನು ಹರಡಲು ಪ್ರಯತ್ನಿಸುವುದು ಎಂದು ಅದರ ಕಾರ್ಯದರ್ಶಿ ಶ್ರೀ ಸಮುದ್ರಾಲ ಲಕ್ಷ್ಮಣಯ್ಯನವರು ತಿಳಿಸಿದರು. ತಿ.ತಿ.ದೇ. ಪ್ರಕಟಿಸಿದ ಧಾರ್ಮಿಕ ಗ್ರಂಥಗಳನ್ನು ಅಲ್ಲಿನ ಗೀತಾ ಸಮಾಜಕ್ಕೆ ನೀಡುತ್ತ ತಿ. ತಿ. ದೇ. ಸಹ ಕಾರ್ಯ ನಿರ್ವಹಣಾಧಿಕಾರಿ ಶ್ರೀ ಡಿ. ಸುಬ್ಬರಾಯಲು ಅವರು ಸಂಸ್ಥೆಯ ಪ್ರಯತ್ನಕ್ಕೆ ಯಶವನ್ನು ಕೋರುತ್ತ ಗ್ರಾಮದ ಜನರು ಹೆಚ್ಚು ಹೆಚ್ಚಿಗೆ ತಮ್ಮನ್ನು ಈ ಧಾರ್ಮಿಕ ಪ್ರಸಾರ, ಪುರೋಗತಿಗಳಲ್ಲಿ ತೊಡಗಿಸಿಕೊಳ್ಳಬೇಕೆಂದು ಕರೆ ನೀಡಿದರು. ಬೊಮ್ಮರಾಜಪಲ್ಲಿಯ ಗೀತಾ ಸಮಾಜ ಸ್ಥಾಪಕರು ಶ್ರೀ ತೋಟರಾಮಚಂದ್ರಯ್ಯ, ಗ್ರಾಮ ಸರಪಂಚ್ ಶ್ರೀ ಎ. ಆರ್. ವೆಂಕಟ್ರಾಜು ಅವರುಗಳು ಬೊಮ್ಮರಾಜಪಲ್ಲಿಯ ಪರವಾಗಿ ಸಭೆಯಲ್ಲಿ ಭಾಗವಹಿಸಿದ್ದರು.

## ಲಾಡು ಬೆಲೆ ಇಳಿತ

ಶ್ರೀ ವೆಂಕಟೇಶ್ವರಸ್ವಾಮಿ ಪ್ರಸಾದ ಲಾಡು ಬೆಲೆಯನ್ನು 1-1-83 ರಿಂದ ಹೊಸವರ್ಷದಲ್ಲಿ ಯಾತ್ರಿಕರಿಗೆ ತಿ. ತಿ. ದೇ. ಕಾಣಿಕೆಯಾಗಿ 3-50 ರಿಂದ 3-00 ರೂಗಳಿಗೆ ಇಳಿಸಲಾಗಿದೆ. ಇನ್ನು ಮುಂದೆ ಭಕ್ತರು ರೂ 3-00ಗಳಿಗೇ ಲಾಡುವನ್ನು ತಿರುಮಲೆಯ ದೇವಸ್ಥಾನದಲ್ಲೂ, ವಿಜಯಾ ಬ್ಯಾಂಕ್ ಕೌಂಟರಿನಲ್ಲೂ ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ದೇವಾಲಯದಲ್ಲೂ ಕೊಂಡು ಕೊಳ್ಳಬಹುದು.

ರೂ 15-00 ಗಳಿಗೆ ಮಾರಲಾಗುತ್ತಿದ್ದ ದೊಡ್ಡ ಗಾತ್ರದ ಲಾಡುವಿನ ಬೆಲೆಯನ್ನು ರೂ 12-00 ಮಾಡಲಾಗಿದೆ. ರೂ 2-50 ಹಾಗೂ ರೂ 4-50 ಗಳಂತೆ ಮಾರುತ್ತಿದ್ದ ಎರಡು ರೀತಿಯ ವಡೆಗಳಿಗೆ ಳಿಗೆ ಬದಲಾಗಿ ಒಂದೇ ರೀತಿಯ ವಡೆಯನ್ನು ರೂ 3-00 ದರದಲ್ಲಿ ವಿಕ್ರಯಿಸಲಾಗುತ್ತಿದೆ.

# ಆಡಳಿತ ನಿರ್ವಾಹಕ ಮಂಡಳಿಯ ತೀರ್ಮಾನಗಳು

ತಿ. ತಿ. ದೇ. ಸಹಕಾರಿ ಸಂಘದ ನಿರ್ದೇಶಕ ಮಂಡಳಿಗೆ ತಿ. ತಿ. ದೇ. ಆಡಳಿತ ನಿರ್ವಾಹಕ ಮಂಡಳಿಯ ಮೂಲಕ ನಾಮಕರಣ ಹೊಂದಬೇಕಾದ ಎರಡುಸ್ಥಾನಗಳಿಗಾಗಿ ಶ್ರೀ ಕೆ. ವೀರಾರೆಡ್ಡಿ ಅವರನ್ನೂ ಶ್ರೀಮತಿ ಕೆ. ಪ್ರಭಾವತಮ್ಮ ಅವರನ್ನೂ ನಾಮಕರಣ ಮಾಡಲಾಯಿತು.

* * * *

ಕಾನ್ಪುರದಲ್ಲಿನ ಕೃತಕ ಅವಯವ ನಿರ್ಮಾಣ ಕೇಂದ್ರದಿಂದ (ಭಾರತದ ಸರಕಾರೀ ಸಂಸ್ಥೆ) ಬದಲಿ ಉದ್ಯೋಗಿಯಾಗಿ ತಿ. ತಿ. ದೇ. ಕೃತಕ ಅವಯವ ಕೇಂದ್ರದಲ್ಲಿ ಕೆಲಸ ಮಾಡುತ್ತಿರುವ ಶ್ರೀ ಸಿ. ಎಂ ರಾಜ್ ಅವರನ್ನು ಅದೇ ಕೆಲಸದಲ್ಲಿ ತಿ. ತಿ. ದೇ. ಉದ್ಯೋಗಿಯನ್ನಾಗಿ 900-40-1300-50-1500 ವೇತನ ಶ್ರೇಣಿಯಲ್ಲಿ ಸ್ವೀಕರಿಸಲು ತೀರ್ಮಾನಿಸಲಾಯಿತು.

* * * *

50% ರಿಯಾಯಿತಿ ದರದಲ್ಲಿ ಇತರ ದೇವಸ್ಥಾನಗಳಿಗೆ ಶ್ವೇತಛತ್ರಗಳನ್ನು ನೀಡುವ ಕಾರ್ಯಕ್ರಮವನ್ನು ಭಾರತದ ಎಲ್ಲ ರಾಜ್ಯಗಳ ದೇವಾಲಯಗಳಿಗೂ ವಿಸ್ತರಿಸಲು ತೀರ್ಮಾನಿಸಿ, ಬಳಕೆಯ ಪ್ರಮಾಣಪತ್ರವನ್ನು ನೀಡಿ ಯಾವುದೇ ಸಮಯದಲ್ಲೂ ತಪಾಸಣೆಗೆ ಸಿದ್ಧವಿರುವುದಾದರೆ ಶೇಷವಸ್ತ್ರವನ್ನು ಉಚಿತವಾಗಿ ನೀಡುವ ಯೋಜನೆಯನ್ನು ಅಂಗೀಕರಿಸಲಾಯಿತು.

* * * *

ತಿ. ತಿ. ದೇ. ಗಳ ಶ್ರೀವೆಂಕಟೇಶ್ವರ ನಾದಸ್ವರ ಶಾಲೆಯ ನಾದಸ್ವರ ಹಾಗೂ ಡೋಲು ಉಪಾಧ್ಯಾಯರಿಗೆ ಅವರುಗಳ ವೇತನಗಳಲ್ಲಿನ ವ್ಯತ್ಯಾಸಗಳನ್ನು ಸಮಗೊಳಿಸಿ 1981 ರ ಏಪ್ರಿಲ್ 1ರಿಂದ ಹೊಸ ಸಮಾನ ವೇತನ ಶ್ರೇಣಿಯಲ್ಲಿ ಅವರನ್ನು ತರಲು ತೀರ್ಮಾನ ಮಾಡಲಾಯಿತು.

* * * *

ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯಕ್ಕೆ ಪ್ರಮುಖರೊಂದಿಗೆ ಬರುವ ಫೋಟೋಗ್ರಾಫರುಗಳನ್ನು ದೇವಸ್ಥಾನದ ಮಹಾದ್ವಾರದಲ್ಲಿಯೇ ತಡೆಯಬೇಕೆಂದೂ, ತಿ.ತಿ.ದೇ. ಫೋಟೋಗ್ರಾಫರ್ ಅನ್ನು ಧ್ವಜಸ್ತಂಭದವರೆಗೆ ಮಾತ್ರವೇ ಅನುಮತಿಸಬೇಕೆಂದೂ ತಿರ್ಮಾನಿಸಲಾಯಿತು.

* * * *

ತಿ. ತಿ. ದೇ. ಗಳ ಆರೋಗ್ಯಶಾಖೆಯಲ್ಲಿ ಕೆಲಸ ಮಾಡುವವರಿಗೆ ಮೂರುಜೊತೆ ಸಮವಸ್ತ್ರವನ್ನೂ ಎರಡು ಜೊತೆ ಪಾದರಕ್ಷೆಗಳನ್ನೂ ನೀಡಲು ನೀರ್ಮಾನಿಸಲಾಯಿತು.

* * * *

ತಿ. ತಿ. ದೇ. ಗಳ ಕಾಲೇಜುಗಳಲ್ಲಿನ ಉಪಾಧ್ಯಾಯರಿಗೆ ಆಂಧ್ರ ಪ್ರದೇಶ್ ಸರ್ಕಾರದಲ್ಲಿನಂತೆಯೇ ದಿನಭತ್ಯವನ್ನು ಜಿ. ಓ. ಎಂ. ಎಸ್. ನಂ. 270/ 20-10-1982 ನಂತೆ ಏರಿಸಲು ತೀರ್ಮಾನಿಸಲಾಯಿತು.

* * * *

ಮದ್ರಾಸಿನ ಸ್ಕ್ರಿಪ್ಟ್ ಆರ್ಟ್ಸ್ ನವರ ಶುಭಾಶಯ ಪತ್ರದೊಂದಿಗೆ ಅವರು ನೀಡುತ್ತಿದ್ದ ತಿ.ತಿ.ದೇ ಮಂಗಲಾಕ್ಷತೆಯನ್ನು ನಿಲ್ಲಿಸಲು ತೀರ್ಮಾನಿಸಲಾಯಿತು.

* * * *

1982-83 ರಲ್ಲಿ ತಿ. ತಿ. ದೇ. ಆಯುರ್ವೇದ ಕಾಲೇಜನ್ನು ಶ್ರೀ ವೆಂಕಟೇಶ್ವರ ಆಯುರ್ವೇದ ಕಾಲೇಜ್ ಎಂಬ ಹೆಸರಿನಲ್ಲಿ ಆರಂಭಿಸುವ ಯೋಜನೆಯನ್ನು ಒಪ್ಪಲಾಯಿತು. ಇದಕ್ಕಾಗಿ ಪ್ರಯೋಗಶಾಲೆಯ ಉಪಕರಣಗಳಿಗಾಗಿ 3 ಲಕ್ಷರೂಗಳೂ 10 ಲಕ್ಷರೂಗಳ ಮೂಲ ವೆಚ್ಚವನ್ನೂ, 5 ಲಕ್ಷ ರೂಗಳ ವಾರ್ಷಿಕ ವೆಚ್ಚವನ್ನೂ ಮಂಜೂರು ಮಾಡಿ, ಇದರ ಪ್ರಿನ್ಸಿಪಾಲರಾಗಿ ಸರ್ಕಾರಿ ಆಯುರ್ವೇದ ಕಾಲೇಜಿನ ಪ್ರಿನ್ಸಿಪಾಲರನ್ನು ಬದಲಿ ವ್ಯವಸ್ಥೆಯಲ್ಲಿ ತರುವ ತೀರ್ಮಾನ ಮಾಡಲಾಯಿತು.

* * * *

ಉದಯಾಸ್ತಮಾನ ಸರ್ವಸೇವಾಯೋಜನೆ ಹಾಗೂ ನಿತ್ಯಲಡ್ಡು ದಾನ ದತ್ತಿಯೋಜನೆಗಳಲ್ಲಿನ ದತ್ತಿ ನೀಡಿದ ಗೃಹಸ್ಥರ ಬಹುಮಾನಗಳನ್ನು ಅವರ ಗೈರು ಹಾಜರಿಯಲ್ಲಿಯೂ ನೀಡಬೇಕೆಂದು ತೀರ್ಮಾನಿಸಲಾಯಿತು.

* * * *

---

## ಮುಂದಿನ ಸಂಚಿಕೆಯಲ್ಲಿ .... ... .

### ಸಪ್ತಗಿರಿ — ಮಾರ್ಚ್ 1983

**ಬೊಮ್ಮಗಟ್ಟಿ ಹುಲಿಕುಂಟೆರಾಯಸ್ವಾಮಿ** — ಎಸ್ ಬಿ ಜಯರಾವ್

**ಪರಾಶರ** — ರಾ. ಅನಂತನಾರಾಯಣ

**ಲೀಲಾಶುಕನ ಕೃಷ್ಣ ಕರ್ಣಾಮೃತ** — ಕಂದಾಡೈ ಕೇಶವನ್

**ಆತ್ಮದ ಸಂದರ್ಶನ** — ಮತ್ತಿಗೆರೆ ಅನಂತು

**ಅನ್ನಮಯ್ಯ - ಜಾನಪದ ಸಂಬಂಧ** — ಸುಧಾಕರ್

**ಪು.ತಿ.ನ. ಅವರ ಅಹಲ್ಯೆ** — ಎ. ಎಸ್ ಪಂಕಜ

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.**

ಬೆಲೆ: ರೂ. 1–00 ಮಾತ್ರ

### 1983
## ಮಾರ್ಚ್ ತಿಂಗಳಿನ ಮುಖ್ಯ ದಿನಗಳು

| | | |
|---|---|---|
| 12. | ಶನಿವಾರ | ತಿರುಪತಿ ಶ್ರೀ ಕೋದಂಡರಾಮಸ್ವಾಮಿ ಬ್ರಹ್ಮೋತ್ಸವ ಅಂಕುರಾರ್ಪಣೆ. |
| 13. | ಭಾನುವಾರ | ... .. ಧ್ವಜಾರೋಹಣ. |
| 15. | ಮಂಗಳವಾರ | ಮೀನ ಸಂಕ್ರಮಣ ( 14 ಹಾಗೂ 15 ) |
| 17. | ಗುರುವಾರ | ಶ್ರೀ ಕೋದಂಡರಾಮಸ್ವಾಮಿ ಗರುಡೋತ್ಸವ. |
| 20. | ಭಾನುವಾರ | ... .. ರಥೋತ್ಸವ. |
| 22. | ಮಂಗಳವಾರ | ಶಾಲಿವಾಹನ ಶಕೆ 1905 ರ ಆರಂಭ ತಾಳ್ಳಪಾಕ ಅನ್ನಮಾಚಾರ್ಯ ಜಯಂತಿ. |
| 24. | ಗುರುವಾರ | ತಿರುಮಲೆ ಶ್ರೀ ವೆಂಕಟೇಶ್ವರಸ್ವಾಮಿ ತೆಪ್ಪೋತ್ಸವಾರಂಭ. |
| 28. | ಸೋಮವಾರ | ... ... ತೆಪ್ಪೋತ್ಸವ ಸಮಾಪ್ತಿ. ಹೋಳಿ ಹಬ್ಬ, ತುಂಬುರ ತೀರ್ಥ ಮುಕ್ಕೋಟಿ. |

## ತಿರುಪ್ಪಾವೈ ಪ್ರವಚನ

ಮೈಸೂರಿನ ಸರಸ್ವತೀಪುರದ ಶ್ರೀ ಶ್ರೀನಿವಾಸ ಸಭಾದವರು ದುಂದುಭಿ ವರ್ಷದ ಧನುರ್ಮಾಸದ ಪ್ರಯುಕ್ತ ತಿರುಪ್ಪಾವೈ ಪ್ರವಚನವನ್ನು ಒಂದು ತಿಂಗಳ ಕಾಲ (16–12–82 ರಿಂದ 14–1–83 ವರೆಗೆ) ಏರ್ಪಡಿಸಿದ್ದರು.

ಶ್ರೀ ಕೊತ್ತಮಂಗಲಂ ವರದಚಾರ್ಯಸ್ವಾಮಿಗಳವರು ಈ ಒಂದು ತಿಂಗಳ ಕಾಲವೂ ಪ್ರತಿದಿನ ಸಂಜೆ 6–80 ಗಂಟೆಯಿಂದ ತಿರುಪ್ಪಾವೈ ಗ್ರಂಥದ ತತ್ತ್ವಾರ್ಥ, ಶ್ರುತಿ, ಪುರಾಣಗಳೊಂದಿಗೆ ಹೋಲಿಕೆಗಳನ್ನು ಕುರಿತು ಸೋದಾಹರಣವಾಗಿ, ಆಸ್ತಿಕ ಹೃದಯಂಗಮವಾಗಿ ಉಪನ್ಯಾಸಮಾಡಿ ತಿಂಗಳ ಕಾಲವೂ ಭಕ್ತರನ್ನು ರಂಗನಾಥ ಪ್ರೇಮದ ರಸ ವಾಹಿನಿಯಲ್ಲಿ ಆರ್ದ್ರಗೊಳ್ಳುವಂತೆ ಮಾಡಿದರು.

16–1–83 ರಂದು ಭಾನುವಾರ ಸಂಜೆ ತಿರುಪ್ಪಾವೈ ಪ್ರವಚನ ಕಾರ್ಯಕ್ರಮದ ಮಂಗಳ ಸರಳವಾಗಿ ಸುಂದರವಾಗಿ ನಡೆಯಿತು ಎಂದು ಶ್ರೀ ಶ್ರೀನಿವಾಸ ಕೃಪಾಸಭಾದವರು ತಿಳಿಸಿದರು.

ತಮಿಳಿನ ಹನ್ನೆರಡು ಮಂದಿ ಆಳ್ವಾರುಗಳಲ್ಲಿ ಒಬ್ಬರಾದ ಶ್ರೀವಿಷ್ಣುಚಿತ್ತರ ಸಾಕು ಮಗಳಾಗಿ ಅಯೋನಿಜೆಯಾಗಿ ಆಂಡಾಳ್ ಅಭಿದಾನದಿಂದ ಇಳೆಗವತರಿಸಿದ ಗೋದಾದೇವಿ ಬಾಲ್ಯದಿಂದ ಪರಮಾತ್ಮನಲ್ಲಿ ಅನುರಕ್ತಳಾಗಿ ಅವನನ್ನು ಪಡೆಯಲು ಗೋಕುಲದ ಗೋಪಿಯರಂತೆ ಧನುರ್ಮಾಸದಲ್ಲಿ ಕಾತ್ಯಾಯನೀ ವ್ರತವನ್ನು ಆಚರಿಸುತ್ತ ದಿನಕ್ಕೊಂದರಂತೆ ಮೂವತ್ತುದಿನ ಹಾಡಿದ ಗೀತೆಗಳೇ ತಿರುಪ್ಪಾವೈ ಎಂಬುದನ್ನೂ ಡಿಸೆಂಬರ್ 1982 ರ ಸಪ್ತಗಿರಿ ಸಂಚಿಕೆಯಲ್ಲಿ ಈ ಬಗ್ಗೆ ವಿಸ್ತಾರವಾಗಿ ಪ್ರಕಟಿಸಲಾಗಿದೆ ಎಂಬುದನ್ನೂ ಇಲ್ಲಿ ನೆನೆಯಬಹುದು.

## ಉಚಿತ ನೇತ್ರ ಚಿಕಿತ್ಸಾ ಶಿಬಿರ

ತಿರುಪತಿಯ ಎರಡನೇ ಸತ್ರದಲ್ಲಿ ಫೆಬ್ರುವರಿ 25 ರಿಂದ ಮಾರ್ಚ್ 7ರವರೆಗೆ ನೇತ್ರ ಚಿಕಿತ್ಸಾ ತಜ್ಞ ಡಾ॥ ಪಿ. ಶಿವಾರೆಡ್ಡಿ ಅವರ ನೇತೃತ್ವದಲ್ಲಿ ನೇತ್ರ ಚಿಕಿತ್ಸಾ ಶಿಬಿರವನ್ನು ಏರ್ಪಡಿಸಲಾಗಿದೆ. ಫೆ. 25, 26 ರಂದು ಹೊರರೋಗಿಗಳನ್ನು ಪರೀಕ್ಷಿಸುವುದು ಹಾಗೂ ಫೆ. 27, 28 ರಂದು ಶಸ್ತ್ರ ಚಿಕಿತ್ಸೆಯನ್ನು ಕೈಗೊಳ್ಳಲಾಗುವುದು. ಶಸ್ತ್ರ ಚಿಕಿತ್ಸೆ ಮಾಡಿಸುಕೊಳ್ಳುವವರಿಗೆ ಹಾಗೂ ಅವರ ಮೇಲು ವಿಚಾರಣೆಯ ಒಬ್ಬರಿಗೆ ಉಚಿತ ಭೋಜನ ವಸತಿ ಸೌಕರ್ಯವನ್ನು ತಿ. ತಿ. ದೇ. ಕಲ್ಪಿಸುವುದೆಂದು ವರದಿಯಾಗಿದೆ. 

Edited and Published on behalf of the T. T. Devasthanams by K. Subba Rao, M. A., and Printed at T. T. D. Press by M. Vijayakumar Reddy Manager, T. T. D. Press, Tirupati - 517 501.





SRI KODANDA RAMA SWAMY TEMPLE, TIRUPATI.
TO 21.3.83] BRAHMOTSAVAM.





